**"Kondajji Basappa"** a biographical sketch originally written by Kala Ramesh & Nitin on behalf of 'AKKA' Vishwalaya -Bengaluru 560082
Translated by : Nagesh K N
Ph: 98455 48313

Published by :
Bharat Scouts and Guides, Karnataka
# 39, Shanthigruha, Palace Road, Next to Maharani's Science College, Bengaluru-560 001.

www.kondajjibasappa.org www. Kondajjibasappa.com
www.bsgkarnata.org
E-mail:shq@bsgkarnataka.org

Number Pages: 100+4
Number of Copies: 5000
Rs: 150/-

Printed by: Chiranthana Media Solutions
No.41, 2nd Floor, 4th Cross, Ganesha Block
Bangalore 560 096.

Cover & Inner pages Designed by:
Muralidhar V Rathod
Caricature: B G Gujjarappa
Printed at :Shubhodaya Printers
#92/2, Pipeline west, Kasturbanagar, Mysore Road
Bengaluru-560025.
Ph 09945277806

## ಅರ್ಪಣೆ

ಕರ್ನಾಟಕದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ಕಟ್ಟಲು ಕೆಲಸ ಮಾಡಿದ ಪ್ರತಿಯೊಬ್ಬರಿಗೂ ಈ ಪುಸ್ತಕ ಅರ್ಪಿಸಲಾಗಿದೆ. ಇಲ್ಲಿ ಯಾರೊಬ್ಬರ ಹೆಸರನ್ನೂ ಪ್ರಸ್ತಾಪಿಸದೆ ಪ್ರತಿಯೊಬ್ಬರನ್ನೂ ಗೌರವಾದರಗಳೊಂದಿಗೆ ನೆನೆಯುತ್ತೇವೆ.

ಕಾಲಿಗೆ ಸ್ವಲ್ಪ ದೂರ,

ಕಣ್ಣಿಗೆ ಸ್ವಲ್ಪ ಹತ್ತಿರ...

(ಮಂಟೇಸ್ವಾಮಿ ಮಹಾಕಾವ್ಯದಿಂದ)

ಯಾವುದೇ ಹಮ್ಮು ಬಿಮ್ಮುಗಳಿಲ್ಲದೆ 'ಎನಗಿಂತ ಕಿರಿಯರಿಲ್ಲ' ಎಂಬ ವಚನಶ್ರೇಷ್ಠರ ಮಾತಿನಂತೆ ಕಾಯಕವನ್ನೇ ಉಸಿರಾಡುತ್ತಾ, ಸುತ್ತಣ ಜನರ ಬದುಕಿಗೆ ಸರಿ ಮಾರ್ಗ ತೋರುತ್ತಾ, ಎಲ್ಲಿಯೂ ಎಂದೂ ತಾನು ಗಣ್ಯನೆಂದು ತೋರಿಸಿಕೊಳ್ಳದೆ ಸರಳವಾಗಿಯೇ ಇದ್ದ ಕೊಂಡಜ್ಜಿ ಬಸಪ್ಪನವರ ಬಗ್ಗೆ ಬರೆಯುವ ಪ್ರಯತ್ನ ಮಾಡುವುದು ಈ ಪುಸ್ತಕ ರೂಪಿಸುವಷ್ಟೇ ಕಷ್ಟದ ಕೆಲಸ. ಅವರ ಚಿತ್ರಗಳನ್ನೇ ನೋಡಿ; ನೆಲದತ್ತ ಮುಖಮಾಡಿರುತ್ತಾರೆ, ಇಲ್ಲವೇ ಯಾರ ಕಡೆಯೋ ಅಥವಾ ಯಾವುದರ ಬಗೆಗೋ ಇರುವ ತಮ್ಮ ಆಸಕ್ತಿಯನ್ನು ನಮ್ಮದಾಗಿಸುವ ಪ್ರಯತ್ನದಲ್ಲಿರುತ್ತಾರೆ. ಕೊಂಡಜ್ಜಿ ಬಸಪ್ಪನವರು ಭಾಗವಹಿಸುವ ಅಥವಾ ಒಪ್ಪಿಕೊಳ್ಳುವ ಕೆಲಸ ಅಥವಾ ಕಾರ್ಯಕ್ರಮದಿಂದ ಯಾರಿಗಾರದೂ ಅನುಕೂಲವಾಗುವಂತಿರಬೇಕು, ಇಲ್ಲವೇ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಅದರಿಂದ ಸಹಾಯವಾಗುವಂತಿದ್ದರೆ ಮುಜುಗರವೆನಿಸಿದರೂ ಹಿಂದೆ ಮುಂದೆ ನೋಡದೆ ಅಂಥ ಚಟುವಟಿಕೆಯಲ್ಲಿ ಭಾಗವಹಿಸುತ್ತಿದ್ದರು. ಒಬ್ಬ ರಾಜಕಾರಣಿಯಾಗಿ, ರಾಜ್ಯ ಹಾಗೂ ಕೇಂದ್ರದಲ್ಲಿ ಮಂತ್ರಿಗಳಾಗಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕರ್ನಾಟಕದ ಮುಖ್ಯ ಕಮೀಷನರ್ ಆಗಿದ್ದ ಕೊಂಡಜ್ಜಿ ಬಸಪ್ಪನವರ ಬದುಕೇ ಅಂಥದ್ದು.

**ಕೊಂಡಜ್ಜಿ ಬಸಪ್ಪನವರ ಬಗೆಗೆ ಅವರಿಗೆ ಪರಿಚಯವಿದ್ದ ಯಾರನ್ನಾದರೂ ಕೇಳಿ ಬಸಪ್ಪನವರ ಸರಳತೆ ಹಾಗೂ ಪ್ರಾಮಾಣಿಕತೆಯ ಕೆಲವು ಘಟನಾವಳಿಗಳನ್ನು ನಿಮ್ಮ ಮುಂದೆ ಬಿಚ್ಚಿಡುತ್ತಾರೆ ಜೊತೆಗೆ ಸನ್ಮಾನ್ಯರಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಬಗೆಗೆ ಇದ್ದ ಬದ್ಧತೆಯ ಬಗ್ಗೆ ಸಾರಿ ಹೇಳುತ್ತಾರೆ**

ಕೊಂಡಜ್ಜಿ ಬಸಪ್ಪನವರ ಬಗೆಗೆ ಅವರಿಗೆ ಪರಿಚಯವಿದ್ದ ಯಾರನ್ನಾದರೂ ಕೇಳಿ ಬಸಪ್ಪನವರ ಸರಳತೆ ಹಾಗೂ ಪ್ರಾಮಾಣಿಕತೆಯ ಕೆಲವು ಘಟನಾವಳಿಗಳನ್ನು ನಿಮ್ಮ ಮುಂದೆ ಬಿಚ್ಚಿಡುತ್ತಾರೆ. ಜೊತೆಗೆ ಸನ್ಮಾನ್ಯರಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಬಗೆಗೆ ಇದ್ದ ಬದ್ಧತೆಯ ಬಗ್ಗೆ ಸಾರಿ ಸಾರಿ ಹೇಳುತ್ತಾರೆ. ಬಸಪ್ಪನವರು ಎಂಥ ಸಂದರ್ಭಗಳಲ್ಲೂ ಕಾರ್ಯಕ್ರಮಗಳಿಗೆ ತಡವಾಗಿ ಬರುತ್ತಿರಲಿಲ್ಲ. ಬಸಪ್ಪನವರು ರಾಜ್ಯ ಮಂತ್ರಿಗಳಾಗಿದ್ದಾಗ ಒಮ್ಮೆ ಸ್ಕೌಟ್ಸ್ ಕಾರ್ಯಕ್ರಮಕ್ಕೆಂದು ತಮ್ಮ ಮಡದಿ ಜೊತೆಯಾಗಿ ಬರುವಾಗ ಹೆದ್ದಾರಿಯಲ್ಲಿ ಕಾರು ಕೆಟ್ಟು ನಿಲ್ಲುತ್ತದೆ; ಆಗ ತಮಗೆ ಕಂಡ ಮೊದಲನೆಯ ಲಾರಿ ಹತ್ತಿ ಕಾರ್ಯಕ್ರಮಕ್ಕೆ ಸರಿಯಾದ ಸಮಯಕ್ಕೆ ಹಾಜರಾಗುತ್ತಾರೆ. ಯಾವುದೋ ಕಥೆಗಳಲ್ಲಿ ಮಾತ್ರ



ಬರಬಹುದಾದ ವ್ಯಕ್ತಿತ್ವದಂತೆ ಕೊಂಡಜ್ಜಿ ಅವರು ನಿಜ ಜೀವನದಲ್ಲಿ ಬದುಕಿದವರು. ಪ್ರಾಮಾಣಿಕೆ, ಸರಳ–ಸಜ್ಜನತೆ ಶ್ರಮ ಜೀವನ ಮತ್ತು ಯಾವುದೇ ಕೆಲಸಕ್ಕೆ ಹೇಳಿ ಮಾಡಿಸಿದಂತಹ ವ್ಯಕ್ತಿತ್ವ

ಚಿತ್ರದುರ್ಗ ಜಿಲ್ಲೆಯ ಹಳ್ಳಿಯ ರೈತ ನಿಂಗಪ್ಪ ಮತ್ತು ಹಾಲಮ್ಮ ದಂಪತಿಗಳಿಗೆ ಜನಿಸಿದ ಬಸಪ್ಪನವರ ಸಲುವಾಗಿ ಕೊಂಡಜ್ಜಿಗೆ ಕೀರ್ತಿ ಬಂದಿತು. ಸನ್ಮಾನ್ಯರ ವ್ಯಕ್ತಿತ್ವ ಮತ್ತು ಸದ್ಗುಣಗಳನ್ನು ಕಂಡು ಆಗಿನ ಕಾಲದ ಶ್ರೀಮಂತರಾದ ಚನ್ನಬಸಪ್ಪನವರು ತಮ್ಮ ಮಗಳನ್ನು ಬಸಪ್ಪನವರಿಗೆ ಧಾರೆ ಎರೆದರು. ಸರ್ವಮಂಗಳ ಮತ್ತು ಕೊಂಡಜ್ಜಿ ಬಸಪ್ಪನವರ ಮದುವೆ ಸುಸೂತ್ರವಾಗಿ ನಡೆಯಿತು, ದಿನಕಳೆದಂತೆ ಅವರ ಹಿಂದಿನ ಸಂಭಂದ ಗಟ್ಟಿಯಾಯಿತು.

ಕೊಂಡಜ್ಜಿ ಬಸಪ್ಪನವರು ಮೂಲತಹ ಸರಳ ಸಜ್ಜನಿಕೆಯ ವ್ಯಕ್ತಿ. ಅವರು ಬೇರೊಬ್ಬರ ಸಂತೋಷದಲ್ಲಿ ತಮ್ಮ ಸಂತೋಷವನ್ನು ಕಾಣುತ್ತಿದ್ದರು. ಅವರ ಸರಳತೆಯಿಂದಾಗಿಯೇ ಎಲ್ಲರೂ ಅವರ ಸಹಾಯ ಸಹಕಾರಗಳನ್ನು ಕೋರಿ ಬರುತ್ತಿದ್ದರು. ಸನ್ಮಾನ್ಯರ ಇಂತಹ ಗುಣಗಳಿಂದಲೇ ಅವರಿಗೆ ಹಣ ಐಶ್ವರ್ಯ ಲಭ್ಯವಾಗಲಿಲ್ಲ. ಆದರೆ ಅವರಿಗೆ ಒಳ್ಳೆಯ ಹೆಸರು ಹಾಗೂ ಸಮಾಜದ ಪ್ರೀತಿ ಪ್ರಾಪ್ತವಾಯಿತು. ಕೊಂಡಜ್ಜಿ ಬಸಪ್ಪನವರು ನ್ಯಾಯವಾದಿಯಾಗಿ ಅನೇಕ ಮಂದಿಗೆ ಸಹಾಯ ಮಾಡಿದ್ದಾರೆ. ಕೇವಲ ಅವರಿಂದ ಹಣ ನಿರಾಕರಿಸುವುದಷ್ಟೇ ಅಲ್ಲ ಕೇಸು ನಡೆಯುವ ಸಂದರ್ಭದಲ್ಲಿ ತಮ್ಮ ಮನೆಯಲ್ಲಿಯೇ ಇರಿಸಿಕೊಂಡು, ಮತ್ತೆ ಹೋಗುವಾಗ ಬಸ್ಸಿಗೆ ಹಣ ಇದೆಯೇ ಎಂದು ಖಾತ್ರಿಪಡಿಸಿಕೊಂಡು ಕಳುಹಿಸಿಕೊಡುತ್ತಿದ್ದರು. ಈ ಬಗ್ಗೆ ಮಾತನಾಡುವ ಕೊಂಡಜ್ಜಿಯವರ ಸ್ನೇಹಿತರು ಮತ್ತು ಕುಟುಂಬ ವರ್ಗದವರು ಸನ್ಮಾನ್ಯರ ಈ ಸೇವೆಯು ಮನೆಯವರಿಗೇನೂ ಸಹಾಯವಾಗಲಿಲ್ಲ ಬದಲಿಗೆ ಮನೆಯಲ್ಲಿದ್ದ ಹಣಕಾಸಿನ ಮುಗ್ಗಟ್ಟು ಇನ್ನಷ್ಟು ಹೆಚ್ಚಾಗಲು ಕಾರಣವಾಯಿತು ಎಂದೇ ಹೇಳುತ್ತಾರೆ. ಅದರ ಜೊತೆಗೆ ಅವರಿಂದ ಸಹಾಯ ಪಡೆದವರು ಇಂದಿಗೂ ಬಹಳ ಪ್ರೀತಿಯಿಂದ ಗೌರವಪೂರ್ವಕವಾಗಿ ನೆನಪಿಸಿಕೊಳ್ಳುತ್ತಾರೆ ಎಂದು ಹೇಳುವುದನ್ನು ಮರೆಯುವುದಿಲ್ಲ.

1971 ರಲ್ಲಿ ಸಂಸದರಾಗಿ ಆಯ್ಕೆಯಾಗಿ ನವದೆಹಲಿಗೆ ಹೋಗಿದ್ದ ಕೊಂಡಜ್ಜಿ ಬಸಪ್ಪನವರು ಕೆಲ ಕಾಲ ನವದೆಹಲಿಯ ಸೌತ್ ಅವೆನ್ಯೂ ಮನೆಯೊಂದರಲ್ಲಿ ವಾಸವಾಗಿದ್ದರು. 1972 ರಿಂದ 74 ರವರೆಗೆ ಉಪ ಮಂತ್ರಿಯಾಗಿ ಶಹಜಹಾನ್ ರಸ್ತೆಯಲ್ಲಿ ವಾಸವಿದ್ದರು. ಆಗಲೂ ಕೂಡಾ ಇವರ ಮನೆಯ ತುಂಬಾ ಅತಿಥಿಗಳದ್ದೇ ಸಾಮ್ರಾಜ್ಯ. ಆರು ತಿಂಗಳು ಕೊಂಡಜ್ಜಿಯವರ ಮನೆಯಲ್ಲಿಯೇ ವಾಸ್ತವ್ಯ ಹೂಡಿದ್ದ ನಿವೃತ್ತ ಪೊಲೀಸ್ ಮಹಾನಿರ್ದೇಶಕ ಎಫ್.ಟಿ.ಆರ್ ಕೊಲಾಸೋ ಅವರಿಂದ ಹಿಡಿದು ಬಸಪ್ಪನವರ ಹಳೆಯ ಮಿತ್ರ ಯು.ಜಿ.ಸಿ ಕೆಲಸಕ್ಕೆಂದು ದೆಹಲಿಗೆ ಹೋಗಿದ್ದ ಸೆಂಟ್ರಲ್ ಕಾಲೇಜಿನ ಪ್ರಾಂಶುಪಾಲ ಡಾ. ಎಂ ಷಡಕ್ಷರಸ್ವಾಮಿಯೂ ಸೇರಿದಂತೆ ಸನ್ಮಾನ್ಯರ ಬಳಿ ಯಾವುದೋ ಸಹಾಯಕ್ಕಾಗಿ ಅರಸಿ ಬಂದವರೆಲ್ಲರೂ ಅಲ್ಲಿಯೇ ತಂಗುತ್ತಿದ್ದರು. ಇಷ್ಟರ ನಡುವೆ ಬಸಪ್ಪನವರ ಹಲವು ಮಕ್ಕಳಿಗೆ ದೆಹಲಿ ಭೇಟಿಯ ಅವಕಾಶವೇ ಸಿಗಲಿಲ್ಲ. ಬಸಪ್ಪನವರು ರಾಜಕಾರಣದಲ್ಲಿಯೂ ಎಂದಿಗೂ ಆಡಂಬರಗಳಿಗೆ ಹೋಗದೆ ಸಮಾಜಮುಖಿಯಾಗಿ ತಮ್ಮ ಬದ್ಧತೆಯನ್ನೇ ಮೆರೆದವರು.

ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಸನ್ಮಾನ್ಯರ ನಿಕಟವರ್ತಿ ಹೆಚ್.ವೈ. ರಾಮಯ್ಯನವರು ಹೇಳುವಂತೆ " ಬಸಪ್ಪನವರು ಒಳ್ಳೆಯ ರಾಜಕಾರಣಿ, ಬಹಳ ಹೆಸರುವಾಸಿಯಾದವರು, ಎಲ್ಲರಿಗೂ ಸಹಾಯ ಮಾಡುತ್ತಿದ್ದವರು ಆದರೆ ಅವರಿಗೆ ರಾಜಕಾರಣದ ಒಳಮರ್ಮಗಳು ಅರ್ಥವಾಗುತ್ತಿರಲಿಲ್ಲ". ಮಂತ್ರಿಯಾಗಿ ಕೊಂಡಜ್ಜಿ ಬಸಪ್ಪನವರು ತಮ್ಮ ಪ್ರಾಮಾಣಿಕತೆಗೆ ಹೆಸರಾದವರು, ದೂರದೃಷ್ಟಿಯುಳ್ಳವರು ಮತ್ತು ಸರ್ವ ಜನಾಂಗದ ಒಳಿತಿಗೆ ಕೆಲಸ ಮಾಡಲು ಉತ್ಸಾಹದಿಂದ ಇದ್ದವರು.

ಶ್ರೀಯುತರು ರಾಜಕಾರಣದ ಜೀವನದಲ್ಲಿ ಬಹಳ ಮಹತ್ವದ ಕೆಲಸಗಳೆಂದರೆ ಶಿಕ್ಷಣಕ್ಕೆ ಒತ್ತು ಕೊಟ್ಟದ್ದು,



ಕೊಂಡಜ್ಜಿ ಬಸಪ್ಪ

ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೆ ಹಾಸ್ಟೆಲ್‌ಗಳನ್ನು ಸ್ಥಾಪಿಸಿದ್ದು ಮತ್ತು ರಾಜ್ಯ ಸರ್ಕಾರಕ್ಕೆ 'ಪಂಚಾಯತ್‌ರಾಜ್ ವರದಿ' ಅವರು ನೀಡಿದ ಕೊಡುಗೆ.

ಕೊಂಡಜ್ಜಿ ಬಸಪ್ಪನವರು ರಾಜ್ಯ ಹಾಗೂ ಕೇಂದ್ರದಲ್ಲಿಯೂ ಮಂತ್ರಿಯಾಗಿದ್ದವರು. ಅವರು ಯಾವ ಸ್ಥಾನಮಾನಗಳಿಗೂ ಜೋತುಬಿದ್ದು ಬದುಕಿದವರಲ್ಲ. ಅಂಥ ಸಂದರ್ಭ ಎದುರಾದಾಗಲೂ ತಮ್ಮ ರಾಜೀನಾಮೆಯನ್ನು ನೀಡಿ ಶಾಂತವಾಗಿ ಹೊರನಡೆದು ಬಿಡುತ್ತಿದ್ದರು. ಅವರು ಸ್ಕೌಟ್ಸ್ ಕ್ಯಾಂಪ್‌ಗಳತ್ತ ಹೊರಳಿದ ದಿನಗಳನ್ನು ನೆನಪಿಸಿಕೊಳ್ಳುವ ಅವರ ಆಪ್ತರು ಶ್ರೀಯುತರ ರಾಜೀನಾಮೆಯ ಬಗ್ಗೆ ಮಾತನಾಡಿದಾಗ 'ಅದು ಮುಗಿದು ಹೋದ ಅಧ್ಯಾಯ. ಸುಮ್ಮನೆ ಮರೆತುಬಿಡಿ' ಎಂದು ಹೇಳಿ ಸಂತೋಷದಿಂದ ಸ್ಕೌಟ್ ಕ್ಯಾಂಪ್‌ಗಳಲ್ಲಿ ಭಾಗವಹಿಸುತ್ತಿದ್ದರು.

ರಾಜಕಾರಣಿಯಾಗಿ ಬಸಪ್ಪನವರು ಬಹಳ ಸೌಮ್ಯ ಸ್ವಭಾವದವರಾಗಿದ್ದರು. ಸ್ಕೌಟ್ಸ್ ಮತ್ತು ಗೈಡ್ಸ್‌ನ ಪದಾಧಿಕಾರಿಯಾಗಿ ಅವರ ನಿಲುವುಗಳು ಬಹಳ ಕಠಿಣವಾಗಿದ್ದವು. ಸಾವಿರಾರು ವಿದ್ಯಾರ್ಥಿಗಳು ಸ್ಕೌಟ್ಸ್ ಮತ್ತು ಗೈಡ್ಸ್‌ನ ತತ್ವದಲ್ಲಿ ಬದುಕಬೇಕೆಂಬ ಅವರ ಹಂಬಲದಿಂದಾಗಿ ಅವರು ಮಕ್ಕಳ ಪಾಲಿಗೆ ಕಾಠಿಣ್ಯದ ತಂದೆಯಂತಿದ್ದರು. ಮಕ್ಕಳು ಪ್ರಾಮಾಣಿಕತೆಯಿಂದ, ಸ್ವಂತ ಶಕ್ತಿಯ ಮೇಲೆ ಇರಬೇಕು, ಪರಿಸರದ ಬಗೆಗೆ ಅವರಿಗೆ ಪ್ರೀತಿ ಕಾಳಜಿಗಳಿರಬೇಕು ಎಂಬ ಆಶೆ ಬಸಪ್ಪನವರದ್ದು. ಶ್ರೀ ಬಸಪ್ಪನವರು ಕರ್ನಾಟಕದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯನ್ನು ಕಟ್ಟಲು ಬಹಳ ಉತ್ಸಾಹದಿಂದ ಕೆಲಸ ಮಾಡಿದವರು. ಚಿಕ್ಕ ವಯಸ್ಸಿನಲ್ಲೇ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಕೆಲಸ ಮಾಡಿದ ಅವರು ರಾಜ್ಯಮಟ್ಟದ ಚೀಫ್ ಕಮೀಷನರ್ ಆಗಿ ಹದಿನೆಂಟು ವರ್ಷಗಳ ಸುದೀರ್ಘ ಸೇವೆ ಸಲ್ಲಿಸಿದರು. ಬಸಪ್ಪನವರು ತಮ್ಮ ವೈಯಕ್ತಿಕ ಬದುಕಿಗಾಗಿ ಆಸ್ತಿ ಮಾಡದೆ ಇದ್ದರೂ ಇಡೀ ರಾಜ್ಯದಾದ್ಯಂತ ಸ್ಕೌಟ್ಸ್ ಮತ್ತು ಗೈಡ್ಸ್‌ಗಾಗಿ ಅನೇಕ ಕಟ್ಟಡಗಳು ಹಾಗೂ ನೂರಾರು ಎಕರೆ ಭೂಮಿ ಪಡೆದು ಇಂದು ಇಡೀ ದೇಶದಲ್ಲೇ ಅತಿ ಹೆಚ್ಚು ಆಸ್ತಿ ಹೊಂದಿರುವ ರಾಜ್ಯ ಘಟಕ ಕರ್ನಾಟಕ ಎಂದು ಹೆಮ್ಮೆಯಿಂದ ಹೇಳಿಕೊಳ್ಳುವಂತೆ ಮಾಡಿದ್ದಾರೆ. ಇದರ ಜೊತೆಗೆ ರಾಜ್ಯದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಪುನರುಜ್ಜಿವನಗೊಳಿಸಲು ಮಾಡಲು ಹೋರಾಟ ಮಾಡಿದರು. ಕೊಂಡಜ್ಜಿಯಲ್ಲಿದ್ದ ಬೋಳು ಗುಡ್ಡಗಳಿಂದು ಅತ್ಯುತ್ತಮ ಕ್ಯಾಂಪ್ ಆಗಿ ಪರಿವರ್ತನೆಗೊಂಡಿರುವುದು ಸನ್ಮಾನ್ಯರ ದೂರದೃಷ್ಟಿತ್ವಕ್ಕೆ ಸಾಕ್ಷಿಯಂತೆ ನಮ್ಮ ಮುಂದಿದೆ. ಅವರಿಗೆ ಹತ್ತಿರದ ಯಾರನ್ನೇ ಕೇಳಿದರೂ ಶ್ರೀಯುತರು ಸಂಬಂಧಗಳಿಗೆ ಕೊಡುತ್ತಿದ್ದ ಬೆಲೆಯ ಬಗ್ಗೆ ತುಂಬು ಹೃದಯದಿಂದ ಜ್ಞಾಪಿಸಿಕೊಳ್ಳುತ್ತಾರೆ.

ದಾವಣಗೆರೆಯ ಚಿಗಟೇರಿ ಸಹೋದರರ ಶಂಕರ ಟೆಕ್ಸ್‌ಟೈಲ್ಸ್ ಹಾಗೂ ಚಿಗಟೇರಿ ಮಿಲ್ಸ್‌ನವರ ತಂದೆ ತೀರಿಹೋದಾಗ ಅವರ ಆತ್ಮೀಯ ಮಿತ್ರ ಶ್ರೀ ಬಸಪ್ಪನವರು ಅವರ ಮಕ್ಕಳ ಬಗ್ಗೆ ಅಪಾರ ಕಾಳಜಿಯಿಂದ ಪ್ರತಿ ಹೆಜ್ಜೆಯನ್ನೂ ಗಮನಿಸಿಕೊಂಡು ಬಂದವರು. ಆ ಬಗ್ಗೆ ಬಹಳ ಗೌರವದಿಂದ ಮಾತನಾಡುವ ಚಿಗಟೇರಿ ಬ್ರದರ್ಸ್, ಬಸಪ್ಪನವರನ್ನು 'ತಮ್ಮ ಪಾಲಿನ ದೇವರು' ಎಂದೇ ಹೇಳುತ್ತಾರೆ. ಕೊಂಡಜ್ಜಿ ಬಸಪ್ಪನವರ ಜೊತೆಗೆ ಕೆಲಸ ಮಾಡಿದ ಪ್ರತಿಯೊಬ್ಬರೂ ಅವರ ಜೊತೆ ಕೆಲಸ ಮಾಡಿದ ಸೌಭಾಗ್ಯವನ್ನು ಸ್ಮರಿಸಿಕೊಳ್ಳುತ್ತಾರೆ. ಕೆಲವರು ಅವರ ಸರಳತೆ ಹಾಗೂ ಸ್ನೇಹಪರತೆಯ ಬಗೆಗೆ ಮಾತನಾಡುತ್ತಾರೆ, ಇನ್ನೂ ಕೆಲವರು ವೈಯಕ್ತಿಕ ಸಂಬಂಧಗಳೆಂದಾಗ ಯಾವ ಔಪಚಾರಿಕತೆಯೂ ಇಲ್ಲದೆ ಸರಳವಾಗಿ ಇದ್ದದ್ದನ್ನು ಸ್ಮರಿಸಿಕೊಳ್ಳುತ್ತಾರೆ.

ಕೊಂಡಜ್ಜಿ ಎಂಬ ಸಣ್ಣ ಗ್ರಾಮದಲ್ಲಿ ಆರಂಭವಾದ ಅವರ ವಿದ್ಯಾಭ್ಯಾಸ ತಮ್ಮ ಹಿತೈಷಿಗಳ ಮತ್ತು ಲಿಂಗಾಯಿತ ಶಿಕ್ಷಣ ಸಂಸ್ಥೆಗಳ ಸಹಕಾರದಿಂದ ಶ್ರೀಯುತರು ಬೆಂಗಳೂರಿಗೆ ತಲುಪಿ 1938ರಲ್ಲಿ ವಿಜ್ಞಾನ ವಿಷಯದಲ್ಲಿ ಪದವಿ ಪಡೆದರು. ಮದುವೆಯ ನಂತರ ಕಾನೂನು ಪದವಿಗಾಗಿ ಪೂನಾಗೆ ತೆರಳಿದರು. 1941 ರಲ್ಲಿ ನ್ಯಾಯವಾದಿಯಾಗಿ



ಎರಡು ವರ್ಷಗಳ ಕಾಲ ದಾವಣಗೆರೆಯಲ್ಲಿ ತಮ್ಮ ವೃತ್ತಿ ಮಾಡಿದ ಕೊಂಡಜ್ಜಿ ಬಸಪ್ಪನವರು, 1943ರಲ್ಲಿ ಚಿತ್ರದುರ್ಗದ ಜಿಲ್ಲಾ ಬೋರ್ಡ್‌ಗೆ ಆಯ್ಕೆಯಾಗಿ 1944ರಲ್ಲಿ ಅತ್ಯಂತ ಕಿರಿಯ ವಯಸ್ಸಿನ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗುವ ಮುಖೇನ ರಾಜಕೀಯ ಜೀವನ ಪ್ರವೇಶಿಸಿದವರು. 1962 ಹಾಗೂ 1967ರಲ್ಲಿ ಎರಡು ಬಾರಿ ದಾವಣಗೆರೆಯಿಂದ ಶಾಸಕರಾಗಿ ಆಯ್ಕೆಯಾದರು. 1971 ಮತ್ತು 1977 ರಲ್ಲಿ ಎರಡು ಬಾರಿ ಚಿತ್ರದುರ್ಗ ಹಾಗೂ ದಾವಣಗೆರೆಯಿಂದ ಸಂಸದರಾಗಿ ಆಯ್ಕೆಯಾದರು.

ನಿರ್ಧಿಷ್ಟ ಗುರಿಯತ್ತ ಚಲಿಸುವ ಸಂಕಲ್ಪ ಕೊಂಡಜ್ಜಿ ಬಸಪ್ಪನವರದ್ದು. ರಾಜಕಾರಣದಲ್ಲಿ ಅವರು ಏರುತ್ತಿದ್ದ ಪ್ರತಿ ಹೆಜ್ಜೆಯಲ್ಲೂ ತಮ್ಮ ಹಳೆಯ ಬೇರುಗಳನ್ನು ಭದ್ರಪಡಿಸಲೋಸುಗವೇ ಶ್ರಮವಹಿಸುತ್ತಿದ್ದರು. ಇದೀಗ ಕೊಂಡಜ್ಜಿಯಲ್ಲಿರುವ 80 ಎಕರೆ ಸ್ಕೌಟ್ಸ್ ಕ್ಯಾಂಪಸ್ ಸನ್ಮಾನ್ಯರ ಕನಸಿನ ಕೂಸು. ಅವರ ಕನಸಿನ ಕೂಸಿನ ಮಡಿಲಿನಲ್ಲೇ ಅವರು ಮಣ್ಣಾಗಿದ್ದಾರೆ. ಈ ಜಾಗವನ್ನು ನೋಡಿದ ಪ್ರತಿಯೊಬ್ಬರಿಗೂ ಕೊಂಡಜ್ಜಿಯವರ ನಿಸ್ವಾರ್ಥ ಸೇವೆ ಹಾಗೂ ಬದ್ಧತೆಯ ಬಗೆಗೆ ಅರಿವು ಮೂಡುತ್ತದೆ. ಇಲ್ಲಿ ಒಂದು ದಶಕಕ್ಕೂ ಹೆಚ್ಚು ಕಾಲ ಸೇವೆ ಸಲ್ಲಿಸಿದರು. ಇದೀಗ ಅವರ ಈ ಕೆಲಸಕ್ಕಾಗಿ ಅವರನ್ನು ಗೌರವದಿಂದ ಕಾಣುವಿರಾ ಅಥವಾ ಕೊಂಡಜ್ಜಿ ಬಸಪ್ಪನವರ ಕನಸನ್ನು ನನಸಾಗಿಸಲು ಶ್ರಮಿಸುತ್ತಿರುವ ಪ್ರತಿ ಸ್ವಯಂಸೇವಕನಲ್ಲೂ ಕೊಂಡಜ್ಜಿಯರನ್ನು ಕಾಣುವಿರಾ...



ನಾ ದೇವನಲ್ಲದೆ ನೀ ದೇವನೆ?
ನೀ ದೇವನಾದಡೆ ಎನ್ನನೇಕೆ ಸಲಹೆ?
ಆರೈದು, ಒಂದು ಕುಡಿತೆ ಉದಕವನೆರೆವೆ,
ಹಸಿದಾಗ ಒಂದು ತುತ್ತು ಓಗರವನಿಕ್ಕುವೆ,
ನಾ ದೇವಕಾಣಾ ಗುಹೇಶ್ವರಾ !

–ಅಲ್ಲಮ

ಅವರು ಉತ್ತಮ ರಾಜಕಾರಣಿಯಾಗಿದ್ದರು, ಬಹಳ ಪ್ರಸಿದ್ಧರಾಗಿದ್ದರು, ಸಹಾಯ ಮಾಡಲು ಸಿದ್ಧಹಸ್ತರು. ಆದರೆ ಅವರಿಗೆ ರಾಜಕೀಯದಲ್ಲಿ ಸಂದರ್ಭಕ್ಕನುಸಾರವಾಗಿ ನಡೆಯುವ ಚಾಲಾಕಿತನ ಇರಲಿಲ್ಲ.
ಶ್ರೀ. ಹೆಚ್. ವೈ.ರಾಮಯ್ಯ, ಮಾಜಿ ರಾಜ್ಯ ಸಂಘಟನಾ ಆಯುಕ್ತರು, ಸ್ಕೌಟ್ಸ್.

ಕೊಂಡಜ್ಜಿ ಬಸಪ್ಪನವರ ಕಿರಿಯ ಪುತ್ರ 60ರ ವಯೋಮಾನದ ಮೋಹನ್ ಕುಮಾರ್ ಕೊಂಡಜ್ಜಿ ಹೇಳುವಂತೆ ಅವರ ತಂದೆ ಶಾಸಕರಾಗಿದ್ದಾಗಲೂ ಸಂಸದರಾಗಿದ್ದಾಗಲೂ ತಮ್ಮ ಕುಟುಂಬ ಯಾವಾಗಲೂ ಒಂದು ರೀತಿಯಲ್ಲಿ ಆರ್ಥಿಕ ಮುಗ್ಗಟ್ಟಿನಲ್ಲೇ ಇರುತ್ತಿತ್ತು. "ಪ್ರತಿ ಚುನಾವಣೆಯಲ್ಲಿ ಮನೆ ಮಾರಿದ್ದಾರೆ. ದಾವಣಗೆರೆಯ ಮನೆಯನ್ನು 1967ರ ಚುನಾವಣೆಗೆ ಮಾರಾಟಮಾಡಿದರು, ಇನ್ನೊಂದು ಮನೆ 1977 ರ ಚುನಾವಣೆಗೆ ಮಾರಿಬಿಟ್ಟರು. ಅವರು ಡೆಪ್ಯೂಟಿ ಮಿನಿಸ್ಟರ್ ಆಗಿದ್ದಾಗ ನಮ್ಮ ತಾಯಿ "ದುಪ್ಪಿ ಮಿನಿಸ್ಟರ್" ಎಂದು ಕಿಂಡಲ್ ಮಾಡುತ್ತಿದ್ದದ್ದುಂಟು. ನ್ಯಾಯವಾದಿಯಾಗಿ ಕೆಲಸ ಮಾಡುವಾಗಲೇ ಈಗಿಗಿಂತ ಆರ್ಥಿಕವಾಗಿ ಚೆನ್ನಾಗಿದ್ದೆವು, ಅವರು ರಾಜಕೀಯ ಬಿಟ್ಟರೇನೆ ಒಳ್ಳೇದು ಎಂದು ನಮ್ಮ ತಾಯಿ ಯಾವಾಗಲೂ ಹೇಳುತ್ತಿದ್ದರು. ಮೋಹನ್ ಕುಮಾರ್ ಕೊಂಡಜ್ಜಿ ಅವರ ಬಾಲ್ಯ ಹಾಗೂ ಯೌವ್ವನದಲ್ಲಿ ಅವರ ತಂದೆಯವರ ಬಗ್ಗೆ ಜನ ಮಾತನಾಡಿಕೊಳ್ಳುತ್ತಿದ್ದದ್ದನ್ನು ನೆನಪಿಸಿಕೊಳ್ಳುತ್ತಾ, ಎಂಥ ಸಂದರ್ಭದಲ್ಲೂ ಜಗ್ಗದೆ ಇರುವ ಪ್ರಾಮಾಣಿಕ ಹಾಗೂ ಸರಳ ರಾಜಕಾರಣಿಯಾಗಿದ್ದರು ಎನ್ನುತ್ತಾರೆ. ಹಾಗಾಗಿ ಆಗಿನ ಕಾಲದಲ್ಲಿ ರಾಜಕಾರಣಿಗಳೆಂದರೆ ತಮ್ಮ ಕೈಗೆಟುಕದವರು ಎನ್ನುವ ತರಹ ಜನ ಇವರನ್ನು ನೋಡಲಿಲ್ಲ ಎಂದು ಹೇಳುತ್ತಾರೆ.

2001 ರಲ್ಲಿ ನಿವೃತ್ತರಾದ ಮಾಜಿ ಪೊಲೀಸ್ ಮಹಾನಿರ್ದೇಶಕ ಡಾ.ಕೆ.ಶ್ರೀನಿವಾಸನ್ ಹೇಳುವಂತೆ ಕೊಂಡಜ್ಜಿ ಬಸಪ್ಪನವರ ಪ್ರಾಮಾಣಿಕತೆ ಬಹಳ ವಿಶಿಷ್ಟವಾದದ್ದಾಗಿದೆ ಎಂಬುದನ್ನು ತಮ್ಮ ಸ್ವ ಅನುಭವದಿಂದಲೇ ನಮ್ಮ ಬಳಿ ಹಂಚಿಕೊಂಡಿದ್ದಾರೆ. ಶ್ರೀನಿವಾಸನ್‌ರವರು ಚಿತ್ರದುರ್ಗದಲ್ಲಿ ಪ್ರಾಂತೀಯ ಸಾರಿಗೆ ಪ್ರಾಧಿಕಾರದಲ್ಲಿ ಕೆಲಸ ಮಾಡುವಾಗ, 1976-77 ಡಿಸೆಂಬರ್‌ವರೆಗೆ ಎಸ್.ಪಿ.ಆಗಿ ಕೆಲಸ ನಿರ್ವಹಿಸಿದಾಗ ಅವರು ಕಂಡ ಬಸಪ್ಪನವರ ಬಗೆಗಿನ ಮಾತುಗಳು ಹೀಗಿವೆ. ಅದಾಗ ಶ್ರೀ ಬಸಪ್ಪನವರು ಸಂಸದರಾಗಿದ್ದರು, ನಾನು ಪಕ್ಕದ ಮನೆಯಲ್ಲೇ ವಾಸವಾಗಿದ್ದೆ. ಆಗಿನ ಸಂದರ್ಭದಲ್ಲಿ ಖಾಸಗಿ ಬಸ್‌ಗಳಿಗೆ ರೂಟ್ ಕೊಡಿಸುವುದು, ನಿಲ್ದಾಣಗಳನ್ನು ನಿಗದಿಮಾಡುವುದು ಇತ್ಯಾದಿಗಳ ಪರವಾನಿಗಿ ಪಡೆಯಲು ಚಿತ್ರದುರ್ಗದಲ್ಲಿ ರಾಜಕೀಯ ಲಾಬಿಗೆ ಬಹಳ ದೊಡ್ಡ ಅವಕಾಶವಿತ್ತು. ಆ ಸಂದರ್ಭದಲ್ಲಿ ರಾಜ್ಯದ 9 ಜಿಲ್ಲೆಗಳಲ್ಲಿ ಚಿತ್ರದುರ್ಗದಲ್ಲೂ ರಾಜ್ಯದ ರಸ್ತೆ ಸಾರಿಗೆಯು ರಾಷ್ಟ್ರೀಕರಣವಾಗದೆ ಉಳಿದಿತ್ತು. ಆಗ ಸಣ್ಣ ಪುಟ್ಟ ಪುಡಾರಿಗಳಿಂದ ಹಿಡಿದು ಅವರ ಚೇಲಾಗಳವರೆಗೆ ಎಲ್ಲರೂ ಬಸಪ್ಪನವರ ಬಳಿಗೆ ಹೋಗಿ ತಮಗೆ ಬೇಕಾದ ರೂಟ್ ಹಾಗೂ ನಿಲ್ದಾಣಗಳಿಗಾಗಿ ಪರವಾನಿಗಿ ತೆಗೆದುಕೊಳ್ಳಲು ಶಿಫಾರಸ್ಸು ಮಾಡುವಂತೆ ಕೋರಿದ್ದಾರೆ. ಆದರೆ ಒಮ್ಮೆಯೂ ಅವರು ನನಗೆ ದೂರವಾಣಿ ಮಾಡಿಯಾಗಲಿ ಅಥವಾ ಭೇಟಿಯಾಗಿ ಯಾರ ಬಗೆಗೂ ಶಿಫಾರಸ್ಸು ಮಾಡಲೇ ಇಲ್ಲ.

96ರ ಹರೆಯದ ಮಾಜಿ ರಾಜ್ಯ ಸಭಾ ಸದಸ್ಯ ಹಾಗೂ ಖ್ಯಾತ ವಾರಪತ್ರಿಕೆ 'ಪ್ರಪಂಚ'ದ ಸಂಪಾದಕರೂ ಆದ ಪಾಟೀಲ್ ಪುಟ್ಟಪ್ಪನವರು ಈ ಇಳಿವಯಸ್ಸಿನಲ್ಲೂ ರಾಜಕೀಯ ವಿಶ್ಲೇಷಣೆಗೆ ಈಗಲೂ ಪತ್ರಿಕೆ ನಡೆಸುತ್ತಿರುವ ದಿನಗಳಂತೆಯೇ ವಿಶ್ಲೇಷಣಾತ್ಮಕವಾಗಿದ್ದಾರೆ. ಅವರೂ ಕೂಡಾ ಕೊಂಡಜ್ಜಿ ಬಸಪ್ಪನವರನ್ನು ಬಹಳ ಪ್ರಾಮಾಣಿಕ ಹಾಗೂ ಒಳ್ಳೆಯವರು ಎಂದು ನೆನಪಿಸಿಕೊಳ್ಳುತ್ತಾರೆ. ಅವರ ಬಗ್ಗೆ ಚಿಲ್ಲರೆ ಆಪಾದನೆಗಳು ಬಂದಾಗ ಕೂಡಾ ದೃತಿಗೆಡುತ್ತಿರಲಿಲ್ಲ. ಲಿಂಗಾಯಿತ ಉಪಜಾತಿಗಳಾದ ಸಾದ ಲಿಂಗಾಯಿತರು, ಸಿರಿಗೆರೆ ಮಠ (ಕೊಂಡಜ್ಜಿ ಬಸಪ್ಪನವರು ಸಾದಲಿಂಗಾಯಿತ ಉಪಜಾತಿಗೆ ಸೇರಿದವರು) ಹಾಗೂ ಬಣಜಿಗ ಲಿಂಗಾಯಿತರ ನಡುವಿನ ವೈರತ್ವದಿಂದಾಗಿ



ಎರಡೂ ಸಮುದಾಯದವರು ಕೊಂಡಜ್ಜಿ ಬಸಪ್ಪನವರನ್ನು ನಂಬುತ್ತಿರಲಿಲ್ಲ ಎಂದು ನೆನಪಿಸಿಕೊಂಡರು. 1940 ರಿಂದ 70ರವರೆಗೆ ಮುರುಘರಾಜೇಂದ್ರ ಮಠ ರಾಜಕೀಯದಲ್ಲಿ ಪ್ರಭಾವ ಬೀರುತ್ತಿದ್ದದ್ದು ಎಲ್ಲರಿಗೂ ತಿಳಿದ ಸಂಗತಿ. ತನ್ನನ್ನು ನಂಬದೆ ಇರುವ ಈ ಎರಡೂ ಮಠಗಳಿಗಾಗಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲು ಕೊಂಡಜ್ಜಿ ಬಸಪ್ಪನವರು ಭೂಮಿ ಕೊಡಿಸಿದರು. ಕೊಂಡಜ್ಜಿ ಅವರು ಕಾಂಗ್ರೆಸ್ ಪಕ್ಷದವರಾದರೂ ಅವರ ಹೃದಯವಂತಿಕೆಯಲ್ಲಿ ಒಬ್ಬ ಕಮ್ಯೂನಿಸ್ಟ್ ಆಗಿದ್ದರು ಎಂದು ಶ್ರೀನಿವಾಸನ್ ಬಸಪ್ಪನವರನ್ನು ಬಣ್ಣಿಸುತ್ತಾರೆ. ಅವರು ಯಾವಾಗಲೂ ಬಡವರ ಪರ ಇದ್ದವರು. ಯಾರಾದರೂ ಬಡವರು ಕೊಂಡಜ್ಜಿ ಅವರನ್ನು ನೋಡಲು ಹೋದರೆ ನನಗೊಂದು ಕರೆ ಬರುತ್ತಿತ್ತು, ಶ್ರೀಮಂತರು, ಉದ್ಯಮಿಗಳು, ಕೈಗಾರಿಕೋದ್ಯಮಿಗಳು ಎಷ್ಟೇ ಲಾಬಿ ನಡೆಸಿದರೂ ನನಗೊಂದು ಫೋನ್ ಮಾಡಿದ್ದೇ ಇಲ್ಲ.

ಒಬ್ಬ ರಾಜಕಾರಣಿಯಾಗಿ ಅವರು ಯಾವ ಹುಡುಕಾಟದಲ್ಲಿ ತೊಡಗಿದ್ದರು ಎಂಬುದನ್ನು ವಿಶ್ಲೇಷಿಸುವುದು ಕಷ್ಟ. ಯಾವುದಾದರೂ ವಿಷಯಕ್ಕೆ ಅವರಿಂದ ಸೂಚನೆ ನಿರೀಕ್ಷೆ ಮಾಡಿದಲ್ಲಿ ಅವರ ಮಾಮೂಲಿ ಶೈಲಿಯಲ್ಲಿ "ನಾನು ಹೇಳಿದೀನ್ರಿ" ಎಂದು ಗಂಭೀರವಾಗಿ ಹೇಳುತ್ತಿದ್ದರು. ಅವರ ಮಾತಿನ ಅರ್ಥವೇನೆಂಬುದನ್ನು ನಾವೇ ಕಲ್ಪಿಸಿಕೊಳ್ಳಬೇಕು. ನಾನೇನಾದರೂ ಅವರ ಕೆಲಸವನ್ನು ಮಾಡಿದ್ದರೆ ಮರು ಭೇಟಿಯಲ್ಲಿ ಅದಕ್ಕೆ ಧನ್ಯವಾದಗಳನ್ನು ತಿಳಿಸದೇ ಇರುತ್ತಿರಲಿಲ್ಲ. ನಿತ್ಯದ ಕಚೇರಿ ಕೆಲಸಗಳಿಗೆ ಅವರೆಂದೂ ತಲೆಹಾಕುತ್ತಿರಲಿಲ್ಲ.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಆಯುಕ್ತರು, ಮಾಜಿ ಹಣಕಾಸು ಸಚಿವರು, ಗೃಹ ಸಚಿವರು, ಸಾರಿಗೆ ಹಾಗೂ ಆರೋಗ್ಯ ಸಚಿವರಾದ ಶ್ರೀ. ಪಿ.ಜಿ.ಆರ್. ಸಿಂಧ್ಯ ಅವರು ತುರ್ತುಪರಿಸ್ಥಿತಿಯ ನಂತರದ ದಿನಗಳಲ್ಲಿ ಕೊಂಡಜ್ಜಿ ಬಸಪ್ಪನವರು ಕಾಂಗ್ರೆಸ್ ಬಿಟ್ಟು ಬಂದದ್ದನ್ನು ನೆನಪಿಸಿಕೊಳ್ಳುವ ಅವರು ಕೊಂಡಜ್ಜಿ ಅವರಿಗೆ ಬಾಬು ಜಗಜೀವನ್ ರಾಮ್‌ರ ಜೊತೆಗಿನ ಸಂಭಂದದ ಬಗ್ಗೆ ಮೆಲುಕು ಹಾಕಿದರು. 1977 ರಲ್ಲಿ ಶ್ರೀಮತಿ ಇಂದಿರಾ ಗಾಂಧಿ ರಾಯಬರೇಲಿಯಿಂದ ಸೋತು, 1978 ರಲ್ಲಿ ಚಿಕ್ಕಮಗಳೂರಿನಲ್ಲಿ ನಡೆದ ಐತಿಹಾಸಿಕ ಉಪಚುನಾವಣೆಯ ಸಂದರ್ಭದಲ್ಲಿ ಕೊಂಡಜ್ಜಿ ಬಸಪ್ಪನವರೊಂದಿಗೆ ಸಂವಾದ ಮಾಡಿದ್ದನ್ನು ಸಿಂಧ್ಯಾ ನೆನಪಿಸಿಕೊಳ್ಳುತ್ತಾರೆ. 1978 ರಲ್ಲಿ ಅಂದಿನ ಮುಖ್ಯಮಂತ್ರಿ ದೇವರಾಜ ಅರಸು ಅವರು ಇಂದಿರಾ ಗಾಂಧಿಯವರ ಪ್ರಚಾರದಲ್ಲಿ ತೊಡಗಿದ್ದರು. ನಮ್ಮ ಪಕ್ಷಕ್ಕೆ ಜಾರ್ಜ್ ಫರ್ನಾಂಡಿಸ್ ಪ್ರಚಾರದಲ್ಲಿ ತೊಡಗಿದ್ದರು. ನಮ್ಮ ಅಭ್ಯರ್ಥಿ ಮಾಜಿ ಮುಖ್ಯಮಂತ್ರಿ ವೀರೇಂದ್ರ ಪಾಟೀಲ್. ಆ ಸಂದರ್ಭದಲ್ಲಿ ಕೊಂಡಜ್ಜಿ ಬಸಪ್ಪನವರಿಗೆ ಚುನಾವಣೆ ಖರ್ಚು ವೆಚ್ಚಗಳನ್ನು ನೋಡಿಕೊಳ್ಳುವ ಸಂಪೂರ್ಣ ಜವಾಬ್ದಾರಿ ವಹಿಸಲಾಗಿತ್ತು, ಅವರಿಗೆ ಸಹಾಯಕ್ಕೆ ನನ್ನನ್ನು ನೇಮಿಸಲಾಗಿತ್ತು. ನಾನಾಗ ಅವರೊಂದಿಗೆ ಸುಮಾರು 45 ದಿನಗಳನ್ನು ಕಳೆದೆ, ನಾವಿಬ್ಬರೂ ಒಂದೇ ರೂಮ್‌ನಲ್ಲಿದ್ದೆವು. ಅವರು ಪಕ್ಷದ ಕಾರ್ಯಕರ್ತರನ್ನು ನಡೆಸಿಕೊಂಡ ರೀತಿ, ನಿತ್ಯ ಭೇಟಿಯಾಗುತ್ತಿದ್ದ ಜನರನ್ನು ನಿಭಾಯಿಸುತ್ತಿದ್ದದ್ದು, ಚುನಾವಣೆಗಾಗಿ ಮೀಸಲಿಟ್ಟಿದ್ದ ಹಣ ಬಳಸುವ ಕ್ರಮ ವಿಶೇಷವಾಗಿತ್ತು. ಅದೇ ಸಂದರ್ಭದಲ್ಲಿ ಕೇರಳದ ಮುಖ್ಯಮಂತ್ರಿ ಸ್ಥಾನಕ್ಕೆ ರಾಜೀನಾಮೆ ಸಲ್ಲಿಸಿದ್ದ ಎ.ಕೆ.ಆಂಟೋನಿಯೂ ಸೇರಿದಂತೆ ಅನೇಕ ನಾಯಕರು ನಮ್ಮ ಪರವಾಗಿ ಪ್ರಚಾರಕ್ಕೆ ಬಂದರು. ನಾವು ಅದರಲ್ಲಿ ಸೋತಿದ್ದರೂ ಬಸಪ್ಪನವರಿಂದ ನಾನು ಅನೇಕ ವಿಷಯಗಳನ್ನು ಕಲಿತೆ. ಕೊಂಡಜ್ಜಿ ಬಸಪ್ಪನವರ ಪ್ರಾಮಾಣಿಕತೆಯ ಬಗೆಗೆ ಇಂದಿಗೂ ನೆನಪಿಸಿಕೊಳ್ಳುವ ಸಿಂಧ್ಯಾ ಅವರು ಅದಾಗ ಚುನಾವಣೆಗೆಂದು ಕೊಟ್ಟಿದ್ದ ಹಣದಲ್ಲಿ ಮಿಕ್ಕ ಹಣವನ್ನು ಬಸಪ್ಪನವರು ಪಕ್ಷದ ಅಧ್ಯಕ್ಷರಿಗೆ ಹಿಂದಿರುಗಿಸಿದ್ದನ್ನು ನೆನೆಪಿಸಿಕೊಳ್ಳುತ್ತಾರೆ. ಸಾಮಾನ್ಯವಾಗಿ ಚುನಾವಣೆಗೆಂದು ಕೊಟ್ಟ ಹಣದಲ್ಲಿ ಮಿಕ್ಕದ್ದು ನಾಯಕರುಗಳು ಹಂಚಿಕೊಳ್ಳುವುದು ಅಂದಿನಿಂದ ಇಂದಿನವರೆಗೂ ವಾಡಿಕೆ. ಅದು ಬಸಪ್ಪನವರ ವಿಷಯದಲ್ಲಿ ಮಾತ್ರ ಸುಳ್ಳು. ಕಾಂಗ್ರೆಸ್ ಭಾರಿ ಜಯಗಳಿಸಿದ ಆ ಸಂದರ್ಭದಲ್ಲಿ



ಸಂಭ್ರಮಾಚರಣೆಯಲ್ಲಿ ತೊಡಗಿದ್ದ ಸಮೂಹವನ್ನು ಎದುರಿಸಿ ಹೇಗೆ ಹೊರಬರುವುದು ಎಂಬ ಆತಂಕದಲ್ಲಿದ್ದಾಗ ಕೊಂಡಜ್ಜಿ ಬಸಪ್ಪನವರು ಬಸ್ ಒಂದರಲ್ಲಿ ಜಿಲ್ಲೆ ಬಿಟ್ಟು ಹೊರಬಂದರು. ಬಹಳಷ್ಟು ಜನ ಬಸಪ್ಪನವರು ಕಾಂಗ್ರೆಸ್ ಪಕ್ಷ ಬಿಟ್ಟದ್ದು ಬಹಳ ದೊಡ್ಡ ತಪ್ಪು ಎಂದೇ ಭಾವಿಸಿದ್ದಾರೆ, ಆದರೆ ಬಸಪ್ಪನವರಿಗೆ ಬಾಬು ಜಗಜೀವನ್‌ರಾಮ್‌ರವರ ಮೇಲಿದ್ದ ವಿಶ್ವಾಸ ಹಾಗೂ ನಿಷ್ಠೆ ಆ ತೀರ್ಮಾನ ಕೈಗೊಳ್ಳಲು ಕಾರಣವಾಯಿತು. ಕೊಂಡಜ್ಜಿ ಅವರಿಗೆ ನಿಜಲಿಂಗಪ್ಪನವರ ಬಗೆಗೂ ಬಹಳ ವಿಶ್ವಾಸವಿತ್ತು. ಕೊಂಡಜ್ಜಿ ಬಸಪ್ಪನವರು ನಿಜಾರ್ಥದಲ್ಲಿ ಕಾಂಗ್ರೆಸಿಗರಾಗಿದ್ದರು. ಅವರಿಗೆ ಕಾಂಗ್ರೆಸ್ ಹಾಗೂ ಜನತಾ ಪಕ್ಷದ ಸಿದ್ಧಾಂತಗಳಲ್ಲಿ ಹೆಚ್ಚೇನೂ ವ್ಯತ್ಯಾಸ ಕಾಣುತ್ತಿರಲಿಲ್ಲ.

ಕೊಂಡಜ್ಜಿ ಬಸಪ್ಪನವರು ಯಾವುದೇ ವ್ಯಕ್ತಿಯನ್ನು ಜಾತಿಯಿಂದಾಗಲಿ ಅಥವಾ ಪಕ್ಷದಿಂದಾಗಲಿ ಕಂಡವರಲ್ಲ. ಒಳ್ಳೆಯ ಕೆಲಸ ಮಾಡುತ್ತಿದ್ದಾರಾ ಇಲ್ಲವೋ ಎಂಬುದಷ್ಟೇ ಅವರು ಇಷ್ಟಪಡುತ್ತಿದ್ದದ್ದು ಎಂದು ಶ್ರೀನಿವಾಸನ್ ಬಹಳ ನಿಖರವಾದ ಪದಗಳಿಂದ ಬಣ್ಣಿಸಿದ್ದಾರೆ.

ಮೋಹನ್ ಕುಮಾರ್ ಕೊಂಡಜ್ಜಿ ತಾವು ಕಾಲೇಜಿನಲ್ಲಿದ್ದಾಗ ಎಸ್.ಎಫ್.ಐ ನಲ್ಲಿ ಭಾಗವಹಿಸಿ ಕಾಂಗ್ರೆಸ್ ವಿರುದ್ಧ ಕೆಲಸ ಮಾಡುವಾಗಲೂ ಮನೆಯಲ್ಲಿ ಆ ಬಗ್ಗೆ ಯಾವುದೇ ಕಿರಿಕಿರಿ ಇರಲಿಲ್ಲ. ಆ ಬಗ್ಗೆ ನಮ್ಮ ತಂದೆ ಎಂದಿಗೂ ತಕರಾರು ಎತ್ತಿದ್ದಿಲ್ಲ. ಒಮ್ಮೆ ನಾನು ಅವರನ್ನು ದೆಹಲಿಯಲ್ಲಿ ಭೇಟಿ ಮಾಡಿದಾಗ ಅವರೇ ನನ್ನನ್ನು ಸಂಸತ್ ಭವನಕ್ಕೆ ಕರೆದೊಯ್ದಿದ್ದರು. ಸಂಸತ್ ಭವನದ ಪಡಸಾಲೆಯಲ್ಲಿ ಸಿ.ಪಿ.ಎಂ ಹಿರಿಯ ಮುಖಂಡ ಅಂದಿನ ಖ್ಯಾತ ಸಂಸದ ಜ್ಯೋತಿರ್‌ಮಯಿ ಬಸು ಅವರನ್ನು ಕಾಣುವ ಸಂದರ್ಭ ಒದಗಿಬಂತು. ನನ್ನ ತಂದೆ ಅವರಿಗೆ ಬಹಳ ಸಂತೋಷದಿಂದ ಪರಿಚಯಿಸಿ ಈತ ನಿಮ್ಮ ಪಕ್ಷದವನು ಎಂದು ಹೇಳಿದ್ದರು.

1943 ರಲ್ಲಿ ಅಂದಿನ ಮೈಸೂರು ರಾಜ್ಯಾಡಳಿತದಲ್ಲಿ ಜಿಲ್ಲಾ ಬೋರ್ಡ್ ಚುನಾವಣೆಗೆ ಮೊದಲ ಬಾರಿ ನಿಂತಾಗ ಶ್ರೀಯುತರ ಮಾವ ಚನ್ನಬಸಪ್ಪನವರು ತಮ್ಮ ಅಳಿಯನನ್ನು ಜಿಲ್ಲಾ ಬೋರ್ಡ್ ಅಧ್ಯಕ್ಷ ಸ್ಥಾನಕ್ಕೆ ತರಲು ಪ್ರಯತ್ನ ಪಡುತ್ತಿದ್ದ ಸಂದರ್ಭದಲ್ಲಿ ರಾಜಕೀಯ ಕುತಂತ್ರವೇ ತಿಳಿಯದ ಕೊಂಡಜ್ಜಿ ಬಸಪ್ಪನವರು ಅವರ ಪ್ರತಿಸ್ಪರ್ಧಿ ಕುಂಬಳೂರು ಫಕೀರಪ್ಪನವರ ಪರವಾಗಿ ಪ್ರಚಾರ ನಡೆಸುತ್ತಿದ್ದರು ಎಂದು ಬಸಪ್ಪನವರ ಆಪ್ತ ಸ್ನೇಹಿತ ಹಾಗೂ ಅವರ ಆತ್ಮಕತೆಯ ಕರ್ತೃ ಮುದೇನೂರು ಸಂಗಣ್ಣ ದಾಖಲಿಸಿದ್ದಾರೆ.

1944 ರಲ್ಲಿ ಕೊಂಡಜ್ಜಿ ಬಸಪ್ಪನವರು ಅತಿ ಚಿಕ್ಕವಯಸ್ಸಿನಲ್ಲಿಯೇ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿ ಆಯ್ಕೆಯಾದರು. ಅಲ್ಲಿಂದ ಮುಂದಿನ ಎರಡು ವರ್ಷಗಳ ಕಾಲ ಇಡೀ ಜಿಲ್ಲೆಯ ಅಭಿವೃದ್ಧಿಗಾಗಿ ಶ್ರಮಿಸಿದರು. ಶಿಕ್ಷಣ ಸಂಸ್ಥೆಗಳು, ನೀರು ಸರಬರಾಜು, ವಿದ್ಯುತ್, ಆಸ್ಪತ್ರೆಗಳು, ರಸ್ತೆ ಕಾಮಗಾರಿ ಹೀಗೆ ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಮಾಡುತ್ತಾ ಹೋದರು ಎಂದು ಹೇಳುವ ಮುದೇನೂರು ಸಂಗಣ್ಣನವರು ದಾವಣಗೆರೆಯಂತಹ ವ್ಯಾಪಾರ ವಹಿವಾಟು ನಗರವೂ ಒಂದು ಒಳ್ಳೆಯ ಶಿಕ್ಷಣ ಕಾಶಿಯಾಗಿ ಮಾರ್ಪಟ್ಟಿದ್ದು ಕೊಂಡಜ್ಜಿಯವರ ಕೌಶಲ್ಯ ಹಾಗೂ ವರ್ಚಸ್ಸಿನಿಂದಲೇ ಎಂಬುದು ಸಂಗಣ್ಣನವರ ಬಲವಾದ ನಂಬಿಕೆ.

ಕೆಲವು ವರ್ಷಗಳ ಬಳಿಕ ಕೊಂಡಜ್ಜಿ ಅವರು ಸ್ಥಳೀಯ ಗಣ್ಯರು ಹಾಗೂ ಸರ್ಕಾರದೊಂದಿಗೆ ಚರ್ಚಿಸಿ ಪ್ರತಿ ತಾಲೂಕಿನಲ್ಲೂ ಪ್ರೌಢ ಶಾಲೆಗಳನ್ನು ಸ್ಥಾಪಿಸಿದ್ದಲ್ಲದೆ ಚಿತ್ರದುರ್ಗದಲ್ಲಿ ಸರ್ಕಾರಿ ಕಾಲೇಜು ಸ್ಥಾಪನೆ ಮಾಡಿಸಿದರು. ದಾವಣಗೆರೆಯಲ್ಲಿ ಇಂಜಿನಿಯರಿಂಗ್ ಕಾಲೇಜು, ಜೆಜೆಎಂ ಮೆಡಿಕಲ್ ಕಾಲೇಜು ಹಾಗೂ ಬಾಪೂಜಿ ಶಿಕ್ಷಣ



ಸಂಸ್ಥೆ ಸ್ಥಾಪನೆ ಮಾಡಲು ಕಾರಣರಾದರು. ಈ ಬಗ್ಗೆ ವರದಿ ಮಾಡುವ ಸಂಗಣ್ಣನವರು ಅ.ನ.ಕೃ ರವರ ಭಾಷಣದ ತಿರುಳನ್ನು ದಾಖಲಿಸಿದ್ದಾರೆ. ಅನಕೃ ಅವರೊಮ್ಮೆ ದಾವಣಗೆರೆಯಲ್ಲಿ ಸಾಹಿತ್ಯ ಸಮಾರಂಭವೊಂದರಲ್ಲಿ ಮಾತನಾಡುವಾಗ " ನಾನು ದಾವಣಗೆರೆಯ ಜನರು ವ್ಯಾಪಾರ ಗುಣವನ್ನೇ ತಮ್ಮ ರಕ್ತದಲ್ಲಿಟ್ಟುಕೊಂಡಿರುವವರು ಸಾಹಿತ್ಯದ ಬಗ್ಗೆ ಯೋಚನೆ ಮಾಡುವುದಿಲ್ಲ ಅಂದುಕೊಂಡಿದ್ದೆ, ಆದರೆ ಇಲ್ಲಿ ಸೇರಿರುವ ಜನರನ್ನು ನೋಡಿದಾಗ ಬಹಳ ಸಂತೋಷವಾಗುತ್ತಿದೆ, ಜೊತೆಗೆ ನನ್ನ ಊಹೆಯಲ್ಲಿದ್ದದ್ದು ಸುಳ್ಳು ಎಂದು ಸಾಬೀತಾಗಿದೆ". ಅನಕೃ ಅವರಿಂದ ಇಂತಹ ಮಾತುಗಳು ಬರಲು ಕಾರಣ ಶ್ರೀ ಕೊಂಡಜ್ಜಿ ಬಸಪ್ಪನವರು ದಾವಣಗೆರೆಯಲ್ಲಿ ಶಿಕ್ಷಣ ಕ್ಷೇತ್ರಕ್ಕೆ ನೀಡಿದ ಕೊಡುಗೆ; ಆದ್ದರಿಂದ ಅದರ ಸಂಪೂರ್ಣ ಶ್ರೇಯ ಬಸಪ್ಪನವರಿಗೇ ಸಲ್ಲಬೇಕು ಎಂದು ಸಂಗಣ್ಣ ಹೇಳುತ್ತಾರೆ. ಕುಗ್ರಾಮಗಳಿಂದ ಬಂದ ಹುಡುಗರಿಗೆ ತಮ್ಮ ಮನೆಯಲ್ಲಿಯೇ ಆಶ್ರಯ ಕೊಟ್ಟು ಓದಿಸಿದ್ದಾರೆ. ಹಿಂದುಳಿದ ವರ್ಗಗಳ ಪಾಲಿಗೆ ಅವರ ಕೊಡುಗೆ ಮಹತ್ವವಾದದ್ದು.

ಐದು ದಶಕಗಳ ಕಾಲ ನಾನು ಅವರನ್ನು ಕಂಡಿದ್ದೇನೆ. ಅವರೆಂದಿಗೂ ತನ್ನ ಜಾತಿಯ ಬಗೆಗೆ ಹೆಚ್ಚು ಒಲವು ತೋರಿಸಿದ್ದನ್ನು ನಾನಂತೂ ಕಂಡೇ ಇಲ್ಲ ಎಂದು ಶ್ರೀನಿವಾಸನ್ ಹೇಳುತ್ತಾರೆ. "ನಮ್ಮ ತಂದೆ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಾಗಲಿ, ರಾಜಕಾರಣದಲ್ಲಾಗಲಿ ವಿಭಿನ್ನ ಸಮುದಾಯದ ಜನರು, ಅಲ್ಪಸಂಖ್ಯಾತರು ಹಾಗೂ ತಳವರ್ಗದವರನ್ನೇ ಅವರು ಆಯ್ಕೆ ಮಾಡಿಕೊಳ್ಳುತ್ತಿದ್ದರು. ತನ್ಮೂಲಕ ವಿಭಿನ್ನ ಹಿನ್ನೆಲೆಯಿಂದ ಬಂದ ವೈವಿಧ್ಯಮಯ ಕಾಳಜಿಗಳ ಸಂಗಮವಾಗಬೇಕು ಹಾಗೂ ಸರ್ವರಿಗೂ ಪ್ರಾತಿನಿಧ್ಯ ದೊರೆಯಬೇಕು ಎಂದು ಕೊಂಡಜ್ಜಿ ಬಸಪ್ಪನವರ ಮಗ ಷಣ್ಮುಖಪ್ಪ ಕೊಂಡಜ್ಜಿ ಹೇಳುತ್ತಾರೆ.

ಕೊಂಡಜ್ಜಿ ಬಸಪ್ಪನವರು ತಾಲ್ಲೂಕು ಕೇಂದ್ರದ ಶಾಲೆಗಳಿಗೆ ಭೇಟಿ ಕೊಟ್ಟಾಗ ದಲಿತ ಹಾಗೂ ಹಿಂದುಳಿದ ವರ್ಗಗಳ ಮಕ್ಕಳು ಎಷ್ಟಿದ್ದಾರೆ ಎಂಬುದೇ ಅವರು ಶಾಲಾ ಆಡಳಿತಕ್ಕೆ ಕೇಳುತ್ತಿದ್ದ ಮೊದಲ ಪ್ರಶ್ನೆ. ಈ ಅಂಶವನ್ನು ಮುದೇನೂರು ಸಂಗಣ್ಣನವರು ದಾಖಲಿಸಿದ್ದಾರೆ. ದಲಿತರು, ಆದಿವಾಸಿ ಸಮುದಾಯಗಳು ಹಾಗೂ ಹಿಂದುಳಿದ ವರ್ಗಗಳ ವಿಮೋಚನೆ ಶಿಕ್ಷಣದಿಂದಲೇ ಆಗಬೇಕು ಎಂಬ ಕೊಂಡಜ್ಜಿ ಬಸಪ್ಪನವರ ತತ್ವವನ್ನು ಇತರರೂ ಒಪ್ಪಿಕೊಂಡಿದ್ದಾರೆ. ಕೊಂಡಜ್ಜಿ ಅವರು ಶಾಸಕ ಮತ್ತು ಸಂಸದರಾಗಿದ್ದಾಗ ಹಿಂದುಳಿದ ವರ್ಗಗಳ ಹಾಸ್ಟೆಲ್‌ಗಳಿಗಾಗಿ ಹೋರಾಟ ಮಾಡಿದ್ದಾರೆ. ಇದರ ಜೊತೆಗೆ ದೊಡ್ಡ ಭೂ ಮಾಲೀಕರಿಂದ ಭೂಮಿ ಇಲ್ಲದವರಿಗೆ ಭೂಮಿ ಕೊಡಿಸಲೋಸುಗ ಗಂಭೀರ ಪ್ರಯತ್ನ ಮಾಡಿಕೊಂಡು ಬಂದವರು ಎಂದು ಮುದೇನೂರು ಸಂಗಣ್ಣ ಬಣ್ಣಿಸಿದ್ದಾರೆ.

1950 ರ ದಶಕದಲ್ಲಿ ಜಿಲ್ಲಾ ಬೋರ್ಡ್‌ನ ಅಧಿಕಾರಿಯಾಗಿದ್ದ ವಿ. ಹನುಮಂತಪ್ಪನವರು ಒಂದು ಪ್ರಸಂಗವನ್ನು ಹೀಗೆ ನೆನೆಪಿಸಿಕೊಳ್ಳುತ್ತಾರೆ. ಅದೊಮ್ಮೆ ಕೊಂಡಜ್ಜಿ ಬಸಪ್ಪನವರು ಪ್ರಯಾಣ ಮಾಡುತ್ತಿದ್ದಾಗ ಹಳ್ಳಿಯ ಅಂಚಿನ ಗುಡಿಸಲೊಂದರಿಂದ ಮಗು ಅಳುವ ಶಬ್ದ ಕೇಳಿ ಕಾರನ್ನು ಅಲ್ಲಿಯೇ ನಿಲ್ಲಿಸುತ್ತಾರೆ. ಹಲವರ ಬಳಿ ಆ ಬಗ್ಗೆ ಕೇಳಿದಾಗ ತುಮಕೂರು ಹಾಗೂ ಚಿತ್ರದುರ್ಗ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುವ ಕಾಡು ಗೊಲ್ಲರಲ್ಲಿ (ಯಾದವ ಸಮುದಾಯದ ಉಪಜಾತಿ) ಹೆರಿಗೆ ಆದಾಗ ಮಗು ಮತ್ತು ಬಾಣಂತಿಯನ್ನು ಊರಿನಿಂದ ನಿಷೇಧಿಸಿ ಊರಾಚೆಗಿನ ಗುಡಸಿಲಿನಲ್ಲಿಡುವ ಅನಿಷ್ಟ ಪದ್ಧತಿಯನ್ನು ಅನುಸರಿಸಿಕೊಂಡು ಬರುತ್ತಿರುವ ವಿಚಾರ ತಿಳಿದು ಕೊಂಡಜ್ಜಿ ಮರುಗುತ್ತಾರೆ. ಆ ಹಸಿ ಬಾಣಂತಿ ಮತ್ತು ಮಗುವಿಗೆ ಅನ್ನ ನೀರು ಕೂಡಾ ಕುಡಿಕೆಯಲ್ಲಿ ಹಾಕಿ ಕೋಲಿನಿಂದ ಗುಡಿಸಲಿನೊಳಗೆ ತಳ್ಳುತ್ತಿದ್ದರು. ಇಂತಹ ಸಂದರ್ಭದಲ್ಲಿ ಪೌಷ್ಟಿಕ ಆಹಾರ ಹಾಗೂ ಶುಚಿತ್ವದ ಕೊರತೆಯಿಂದಾಗಿ ಎಷ್ಟೋ ಹೆಂಗಸರು ಮತ್ತು ಮಕ್ಕಳು ಜೀವ ಕಳೆದುಕೊಂಡಿದ್ದಾರೆ. ಆ ಬಗ್ಗೆ ಗಂಭೀರವಾಗಿ ಚಿಂತಿಸಿದ ಕೊಂಡಜ್ಜಿ ಬಸಪ್ಪನವರು ಒಂದೇ ವಾರದಲ್ಲಿ ಸಮುದಾಯದ ಮುಖಂಡರನ್ನೆಲ್ಲಾ ಕರೆಸಿ ತಿಳಿಹೇಳಿ ಹೆಣ್ಣು ಮಕ್ಕಳನ್ನು ಬಹಿಷ್ಕರಿಸುವ ಅನಿಷ್ಟ ಪದ್ಧತಿಯನ್ನು



ನಿಲ್ಲಿಸುವಂತೆ ಪ್ರಮಾಣ ಮಾಡಿಸಿದರು. ಆ ಭಾಗಕ್ಕೆ ಹೆರಿಗೆ ಆಸ್ಪತ್ರೆ ತರಲು ಮುಂದಾದರು, ಆರು ತಿಂಗಳಲ್ಲಿ ಹೆರಿಗೆ ಆಸ್ಪತ್ರೆಯೂ ಬಂದಾಯ್ತು. ಆ ಹೊತ್ತಿಗೆ ಕೊಂಚ ಸುಧಾರಿಸಿತು ಎಂದಿಟ್ಟುಕೊಳ್ಳೋಣ, ಆದರೆ ಇಂದಿಗೂ ಆ ಅನಿಷ್ಟ ಪದ್ಧತಿ ಉಳಿದುಕೊಂಡು ಬಂದಿದೆ.

ಕುಷ್ಟ ರೋಗಿಗಳೆಂದರೆ ಊರಾಚೆ ಕಳುಹಿಸುತ್ತಿದ್ದ ದಿನಗಳಲ್ಲಿ ಬೆಂಗಳೂರಿನ ಕುಷ್ಠ ಚಿಕಿತ್ಸ ಸಂಘವೊಂದು ಕುಷ್ಠ ರೋಗಿಗಳ ಆರೈಕೆಗೆ ಕೆಲಸ ಮಾಡುತ್ತಿದ್ದದ್ದನ್ನು ಕಂಡು ಅವರಿಗೆ ಕೊಂಡಜ್ಜಿಯಲ್ಲಿ ಕುಷ್ಟ ರೋಗದ ಆಸ್ಪತ್ರೆ ಕಟ್ಟಿಸಲು ನೆರವಾದರು. ಈ ವಿಷಯವನ್ನು 1990 ರಲ್ಲಿ ಪ್ರಕಟಗೊಂಡ 'ಸೇವಾ ಚೇತನ' ಸ್ಮರಣ ಸಂಚಿಕೆಯಲ್ಲಿ ಹೈಕೋರ್ಟ್ ನ್ಯಾಯಾಧೀಶರಾದ ಮೀರ್ ಇಕ್ಬಾಲ್ ಹುಸೇನ್‌ರವರು ನೆನಪಿಸಿಕೊಂಡಿದ್ದಾರೆ.

ನಮ್ಮ ತಂದೆ ನಿಷ್ಕಪಟ, ನೇರ ನಡೆ ನುಡಿಯ ರಾಜಕಾರಣಿ, ಒಳಗೊಂದು ಹೊರಗೊಂದು ಮಾತು ಆಡುತ್ತಿದ್ದವರೇ ಅಲ್ಲ. ತನ್ನ ಸಹೊದ್ಯೋಗಿಗಳ ಭ್ರಷ್ಟಾಚಾರದ ಬಗ್ಗೆ ನೇರವಾಗಿ ಮಾತನಾಡುತ್ತಿದ್ದರು ಎಂದು ಮೋಹನ್ ಕುಮಾರ್ ಕೊಂಡಜ್ಜಿ ಸ್ಮರಿಸಿಕೊಳ್ಳುತ್ತಾರೆ. " ಅವ ದುಡ್ಡು ಪಡೆದಿದ್ದಾನೆ, ತನ್ನ ಜಾತಿಯವರಿಗೇ ಕೆಲಸ ಮಾಡುತ್ತಿದ್ದಾನೆ" ಎಂದು ನೇರವಾಗಿ ಹೇಳುತ್ತಿದ್ದರು. ಇಂತಹ ಮಾತುಗಳಿಂದ ತನ್ನ ಸಮಕಾಲೀನರ ಜೊತೆ ಇಕ್ಕಟ್ಟಿಗೆ ಸಿಲುಕಿಕೊಳ್ಳುತ್ತಿದ್ದರು.

ಕೊಂಡಜ್ಜಿ ಬಸಪ್ಪನವರು ಎಲ್ಲಾ ಮಗ್ಗುಲುಗಳಿಂದಲೂ ಶ್ರೇಷ್ಟ ರಾಜಕಾರಣಿಯಾಗಿದ್ದರು. ಭ್ರಷ್ಟಾಚಾರ ಮಾಡುವವರನ್ನು ಗದರಿಸಿ ಸರಿದಾರಿಗೆ ತಂದುಬಿಡುವ ವ್ಯರ್ಥ ಪ್ರಯತ್ನ ಮಾಡುತ್ತಿರಲಿಲ್ಲ. ಆದರೆ ತಾವು ಸರಿ ಮಾರ್ಗದಲ್ಲಿ ನಡೆದುಕೊಂಡು ಇತರರಿಗೆ ಮಾದರಿಯಂತೆ ಬದುಕಿದರು. ಅವರು ಪರಸ್ಪರ ಜಟಾಪಟಿಗಳಿಗೆ ಹೋಗುತ್ತಿದ್ದವರಲ್ಲ, ಅವರ ಪಾಲಿನ ಕೆಲಸಕ್ಕಿಂತಲೂ ಹೆಚ್ಚಿನದನ್ನು ನಿರಂತರವಾಗಿ ಮಾಡುತ್ತಾ ಹೋದರು. ಅವರ ಈ ಗುಣವೇ ಶ್ರೀಯುತರಿಗೆ ತಮ್ಮ ಪಕ್ಷದವರಿಂದ ವಿರೋದ ಪಕ್ಷದವರಿಂದ ಒಳ್ಳೆಯ ಹೆಸರು ಪ್ರಾಪ್ತವಾಗಿತ್ತು. ಅಂತದೊಂದು ಹೆಸರಿನಿಂದಲೇ ಕೊಂಡಜ್ಜಿ ಬಸಪ್ಪನವರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯನ್ನು ಸಮರ್ಥವಾಗಿ ಕಟ್ಟಿ ಬೆಳೆಸಿದರು.



# ಕೊಂಡಜ್ಜಿ ಬಸಪ್ಪನವರು ಜನತಾ ಪಕ್ಷಕ್ಕೆ ಸೇರಿಕೊಳ್ಳಲು ಪೂರಕವಾದ ಘಟನೆಗಳು

ಇಂದಿರಾ ಗಾಂಧಿ ಅವರಿಗೆ ನಿಷ್ಠರಾಗಿದ್ದ ಕೊಂಡಜ್ಜಿ ಬಸಪ್ಪನವರನ್ನು ಕೇಂದ್ರ ಉಪ ಮಂತ್ರಿ ಸ್ಥಾನದಿಂದ ಬಿಟ್ಟದ್ದು ಏಕೆ ಎಂಬುದು ಇಂದಿಗೂ ನಿಗೂಢವಾಗಿಯೇ ಉಳಿದಿದೆ. ಆ ಬಗ್ಗೆ ರಾಜಕೀಯ ವಲಯದಲ್ಲಿ ಅನೇಕ ಊಹಾಪೋಹಗಳು ಹುಟ್ಟಿಕೊಂಡಿದ್ದವು. ಸ್ಥಳೀಯ ಜಿಲ್ಲೆಯ ರಾಜಕೀಯಗಳ ಕಾರಣಗಳಿಗೆ ಬಿಡಲಾಯಿತು ಎಂದು, ನಿಜಲಿಂಗಪ್ಪನವರ ಜೊತೆ ನಿರಂತರ ಸಂಪರ್ಕ ಇಟ್ಟುಕೊಂಡಿರುವುದಕ್ಕೆ ಹೀಗಾಯಿತು ಎಂದು (ನಿಜಲಿಂಗಪ್ಪನವರು ಅಖಂಡ ಕಾಂಗ್ರೆಸ್ ಪಕ್ಷ ಇಬ್ಭಾಗವಾದಾಗ (1969) ಬೇರೊಂದು ಗುಂಪಿನಲ್ಲಿದ್ದವರು).

**1977ರಲ್ಲಿ ದಾವಣಗೆರೆಯಿಂದ ಲೋಕಸಭಾ ಚುನಾವಣೆಗೆ ಸ್ಪರ್ಧಿಸಲು ಇಂದಿರಾ ಗಾಂಧಿ ಹಾಗೂ ದೇವರಾಜ ಅರಸು ಅವರು ಕೊಂಡಜ್ಜಿ ಬಸಪ್ಪನವರಿಗೆ ಅವಕಾಶ ಮಾಡಿಕೊಟ್ಟರು. ಆ ಚುನಾವಣೆಯಲ್ಲಿ ಅತ್ಯಂತ ಅಧಿಕ ಮತಗಳಿಂದ ಕೊಂಡಜ್ಜಿ ಬಸಪ್ಪನವರು ಜಯಶೀಲರಾದರು. ಆದರೆ ಕೇಂದ್ರದಲ್ಲಿ ಕಾಂಗ್ರೆಸ್ ಪಕ್ಷ ಅಧಿಕಾರ ಕಳೆದುಕೊಂಡಿತು.**

**ರಾಜೀನಾಮೆ ನೀಡಿದ ಪ್ರಸಂಗ:** ಅದೊಂದು ದಿನ ಇಂದಿರಾ ಗಾಂಧಿ ಅವರ ನಿಕಟವರ್ತಿ, ಕೇಂದ್ರ ಸಚಿವ ಉಮಾಶಂಕರ್ ದೀಕ್ಷಿತ್ ಅವರು ಕೊಂಡಜ್ಜಿ ಬಸಪ್ಪನವರನ್ನು ತಮ್ಮ ಮನೆಗೆ ಬರುವಂತೆ ಸೂಚಿಸಿದ್ದರು. ಇಬ್ಬರೂ ಕುಳಿತಾಗ ಉಮಾಶಂಕರ್ ದೀಕ್ಷಿತ್ ಪಕ್ಷವನ್ನು ಹೆಚ್ಚು ಬಲಿಷ್ಠವಾಗಿ ಕಟ್ಟಬೇಕು ಎಂತಲೂ, ಅದಕ್ಕಾಗಿ ಖಾತೆಗಳ ಮರು ಹಂಚಿಕೆ ಆಗಬೇಕೆಂತಲೂ ತಾವೊಬ್ಬರೇ ಪುಂಖಾನು ಪುಂಖ ಮಾತನಾಡುತ್ತಿದ್ದನ್ನು ಗ್ರಹಿಸಿದ ಕೊಂಡಜ್ಜಿ ಬಸಪ್ಪನವರು 'ಮ್ಯಾಡಮ್ ನನ್ನ



ರಾಜೀನಾಮೆಯನ್ನು ನಿರೀಕ್ಷಿಸುತ್ತಿದ್ದಾರಾ'. ಎಂದು ನೇರವಾಗಿಯೇ ಕೇಳಿದರು. ಕೂಡಲೇ ರಾಜೀನಾಮೆ ಕೊಡಲು ಮುಂದಾದರು. ಉಮಾಶಂಕರ್ ದೀಕ್ಷಿತ್ ಅವರು ಮನೆಗೆ ಹೋಗಿ ನಿಧಾನವಾಗಿ ಪತ್ರ ಕಳುಹಿಸಿ ಎಂಬ ಮಾತನ್ನೂ ಕೇಳದೆ ಕೂಡಲೇ ಅಲ್ಲಿಯೇ ರಾಜೀನಾಮೆ ಪತ್ರ ಬರೆದುಕೊಟ್ಟು ಹೊರನಡೆದರು. ಉಪ ಮಂತ್ರಿಯಾಗಿ ತಮ್ಮ ಮಂತ್ರಿ ಮಂಡಲದಲ್ಲಿ ಕೆಲಸ ಮಾಡಲು ಅವಕಾಶ ಕೊಟ್ಟಿದ್ದಕ್ಕಾಗಿ ಶ್ರೀಮತಿ ಇಂದಿರಾ ಗಾಂಧಿ ಅವರಿಗೆ ಧನ್ಯವಾದಗಳನ್ನು ತಿಳಿಸಿ ಉಮಾಶಂಕರ್ ದೀಕ್ಷಿತ್ ಅವರಿಗೆ ಪತ್ರ ಕೊಟ್ಟು ಬೆಂಗಳೂರಿಗೆ ಬಂದರು.

ಈ ಘಟನೆಯನ್ನು ಧಾರವಾಡದ ಸ್ಕೌಟ್ಸ್ ಮತ್ತು ಗೈಡ್ಸ್‌ನ ಮುಖ್ಯ ಆಯುಕ್ತರಾದ ಶ್ರೀ ಲೊಂಡೆ ಅವರು ನೆನೆಪಿಸಿಕೊಳ್ಳುತ್ತಾರೆ: ಬಸಪ್ಪನವರು ಕೇಂದ್ರ ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿದ ಬಳಿಕ ಬೆಳಗಾವಿಯ ಸ್ಕೌಟ್ ಕ್ಯಾಂಪ್‌ಗೆ ಬಂದರು, ರಾಜೀನಾಮೆ ಕುರಿತು ಕೇಳಿದ ಯಾವ ಪ್ರಶ್ನೆಗಳಿಗೂ ಉತ್ತರಿಸದೆ ಅದು ಮುಗಿದ ಅಧ್ಯಾಯ ಎಂದು ನಿರುಮ್ಮಳವಾಗಿ ಹೇಳಿ ಕ್ಯಾಂಪ್‌ನಲ್ಲಿ ಸಕ್ರಿಯವಾಗಿ ಭಾಗವಹಿಸಿದರು.

1977ರಲ್ಲಿ ಹೊಸದಾಗಿ ಲೋಕಸಭಾ ಕ್ಷೇತ್ರಕ್ಕೆ ಸೇರ್ಪಡೆಯಾದ ದಾವಣಗೆರೆ ಲೋಕಸಭಾ ಚುನಾವಣೆಗೆ ಸ್ಪರ್ಧಿಸಲು ಇಂದಿರಾ ಗಾಂಧಿ ಹಾಗೂ ದೇವರಾಜ ಅರಸು ಅವರು ಕೊಂಡಜ್ಜಿ ಬಸಪ್ಪನವರಿಗೆ ಅವಕಾಶ ಮಾಡಿಕೊಟ್ಟರು. ಆ ಚುನಾವಣೆಯಲ್ಲಿ ಅತ್ಯಂತ ಅಧಿಕ ಮತಗಳಿಂದ ಕೊಂಡಜ್ಜಿ ಬಸಪ್ಪನವರು ಜಯಶೀಲರಾದರು. ಆದರೆ ಕೇಂದ್ರದಲ್ಲಿ ಕಾಂಗ್ರೆಸ್ ಪಕ್ಷ ಅಧಿಕಾರ ಕಳೆದುಕೊಂಡಿತು. ತುರ್ತು ಪರಿಸ್ಥಿತಿಯ ಪರಿಣಾಮವಾಗಿ ಸ್ವತಃ ಇಂದಿರಾ ಗಾಂಧಿ ಸೋಲುಂಡರು. 1977ರಲ್ಲಿ ಜನತಾ ಪಕ್ಷ ಕೇಂದ್ರದಲ್ಲಿ ಸರ್ಕಾರ ರಚನೆ ಮಾಡಿತು. ಆಗಲೂ 1978ರಲ್ಲಿ ದೇವರಾಜ ಅರಸು ಕರ್ನಾಟಕದಲ್ಲಿ ಕಾಂಗ್ರೆಸ್ ಪಕ್ಷ ತರುವಲ್ಲಿ ಯಶಸ್ವಿಯಾಗಿದ್ದರು. ಆ ಸಂದರ್ಭದಲ್ಲಿ ಸ್ಥಳೀಯ ರಾಜಕೀಯ, ಜಿಲ್ಲೆಯ ರಾಜಕೀಯಗಳಿಂದ ಬೇಸತ್ತಿದ್ದ ಕೊಂಡಜ್ಜಿ ಬಸಪ್ಪನವರು ತಮ್ಮ ಸಹೋದ್ಯೋಗಿ ಡಾ.ಸರೋಜಿನಿ ಮಹಿಷಿ ಅವರ ಜೊತೆಗೂಡಿ ಜನತಾ ಪಕ್ಷಕ್ಕೆ ಸೇರ್ಪಡೆಯಾದರು. ಇವರೀರ್ವರೂ ಇಂದಿರಾ ಗಾಂಧಿ ಅವರ ಸಚಿವ ಸಂಪುಟದಲ್ಲಿ ಮಂತ್ರಿಗಳಾಗಿದ್ದರು. ಅದಾಗ ರಾಜ್ಯದಲ್ಲಿ ಹೆಚ್ಚುತ್ತಿದ್ದ ಭ್ರಷ್ಟಾಚಾರ ಹಾಗೂ ಪಕ್ಷದ ವಿಚಿತ್ರ ನಡವಳಿಕೆ ಮುಂತಾದ ಕಾರಣಗಳಿಂದ ಕೊಂಡಜ್ಜಿ ಬಸಪ್ಪ ರಾಜೀನಾಮೆ ನೀಡಿರುವುದಾಗಿ ರಾಜಕೀಯ ವಲಯದಲ್ಲಿ ಸುದ್ದಿ ಆಯಿತು. ಇದರ ಜೊತೆಗೆ ಸನ್ಮಾನ್ಯರಿಗೆ ಬಾಬು ಜಗಜೀವನ್‌ರಾಮ್, ಹೆಚ್.ಎನ್. ಬಹುಗುಣ ಮತ್ತು ಚಂದ್ರಶೇಖರ್ ಅವರೊಂದಿಗಿನ ನಿಕಟ ಸಂಪರ್ಕವೂ ಒಂದು ಕಾರಣ ಎಂಬ ಸುದ್ದಿಗಳು ರಾಜಕೀಯವಲಯದಲ್ಲಿ ದಟ್ಟವಾಗಿದ್ದವು.



1963 ರಲ್ಲಿ ರಾಮಕೃಷ್ಣ ಹೆಗಡೆ ಅವರು ಗ್ರಾಮೀಣಾಭಿವೃದ್ಧಿ ಸಚಿವರಾಗಿದ್ದಾಗ ಕೊಂಡಜ್ಜಿ ಬಸಪ್ಪನವರ ಅಧ್ಯಕ್ಷತೆಯಲ್ಲಿ ರಚಿಸಿದ "ಕೊಂಡಜ್ಜಿ ಬಸಪ್ಪ ಪಂಚಾಯತ್ ರಾಜ್ ಸಮಿತಿ" ಆಡಳಿತ ವಿಕೇಂದ್ರೀಕರಣಕ್ಕೆ ಮಹತ್ವವಾದ ಮೈಲಿಗಲ್ಲಾಯಿತು. ಸನ್ಮಾನ್ಯರ ಅಧ್ಯಕ್ಷತೆಯ ಈ ಸಮಿತಿ ಮಾಡಿದ ವರದಿ 1964ರಲ್ಲಿ ಅಂದಿನ ಮೈಸೂರು ಪಂಚಾಯತ್ ರಾಜ್ ಬಿಲ್‌ನ ಮೇಲೆ ಬಹಳ ಪ್ರಭಾವ ಬೀರಿತ್ತು. ಆದರೆ ದುರದೃಷ್ಟವಶಾತ್ ಅದು ಊರ್ಜಿತವಾಗಲಿಲ್ಲ. ಆಗ ಕಾಂಗ್ರೆಸ್ ಇಬ್ಭಾಗವಾಗಿ ಶಾಸನ ಸಭೆ ವಿಸರ್ಜನೆ ಆಗಿದ್ದರಿಂದ ವಿಕೇಂದ್ರೀಕರಣದ ಪ್ರಸ್ತಾವಕ್ಕೆ ನ್ಯಾಯ ಸಿಗಲಿಲ್ಲ ಎಂದು ಮದ್ರಾಸ್ ಇನ್‌ಸ್ಟಿಟ್ಯೂಟ್ ಆಫ್ ಡೆವಲಪ್‌ಮೆಂಟ್ ಸ್ಟಡೀಸ್ ತನ್ನ ಪ್ರಭಂದವೊಂದರಲ್ಲಿ (ನಂ.184ರಲ್ಲಿ) ಪ್ರಸ್ತಾವ ಮಾಡಿದೆ. ಆದರೆ ಅದೇ ಕೊಂಡಜ್ಜಿ ಬಸಪ್ಪನವರ ಸಮಿತಿಯ ವರದಿಯು 1983ರ ಪಂಚಾಯತ್‌ರಾಜ್ ಮಸೂದೆಗೆ ಅಡಿಪಾಯವಾಗಿ ಕೆಲಸ ಮಾಡಿದೆ. ಆ ಬಗ್ಗೆ ಹೆಚ್ಚಿನ ಪ್ರಚಾರವಾಗಲಿ ಸಾಹಿತ್ಯದಲ್ಲಿ ದಾಖಲೆಯಾಗಲಿ ಹೆಚ್ಚಿನ ಪ್ರಮಾಣದಲ್ಲಿ ಆಗಿಲ್ಲ. ಆಡಳಿತ ವಿಕೇಂದ್ರೀಕರಣದ ಬಗೆಗೆ ಆ ವರದಿಯಲ್ಲಿ ಮಂಡನೆಯಾಗಿದ್ದ ವಿಚಾರ ಆಗಿನ ಕರ್ನಾಟಕಕ್ಕೆ ಹೊಸದಾಗಿತ್ತು.

ಕೊಂಡಜ್ಜಿ ಬಸಪ್ಪ ಪಂಚಾಯತ್‌ರಾಜ್ ಸಮಿತಿ ವರದಿಯಲ್ಲಿರುವ ಕೆಲವು ಅಂಶಗಳು 1983ರ ಪಂಚಾಯತ್ ರಾಜ್ ಮಸೂದೆಯಲ್ಲಿ ಒಳಗೊಂಡಿವೆ.

- ಮಹಿಳಾ ಮೀಸಲಾತಿ
- ಗ್ರಾಮ ಸಭೆಗಳು
- ನ್ಯಾಯ ಪಂಚಾಯತ್‌ಗಳನ್ನು ಮಾಡುವ ಬಗ್ಗೆ
- ಪಂಚಾಯತ್‌ರಾಜ್ ಅಧ್ಯಕ್ಷರ ಆಡಳಿತದಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಕಾರ್ಯನಿರ್ವಹಿಸುವುದು.
- ರಾಜ್ಯದ ಪಂಚಾಯತ್ ಕೌನ್ಸಿಲ್ ಮಾಡುವುದು



ಯಾರಾದರೂ ತೊಂದರೆಯಲ್ಲಿದ್ದರೆ "ಬನ್ನಿ ಬಸಪ್ಪನವರ ಬಳಿಗೆ ಹೋಗೋಣ; ಅವರು ಸಹಾಯ ಮಾಡಬಹುದು" ಎಂದು ಹೇಳುತ್ತಿದ್ದೆ. ಅವರು ಮಂತ್ರಿಯಾಗಿದ್ದಾಗಲೂ ಸಹ ಸಾಮಾನ್ಯರಲ್ಲಿ ಸಾಮಾನ್ಯರಾಗಿ ತಮ್ಮಲ್ಲಿಗೆ ಬಂದವರು ಎಷ್ಟೇ ಚಿಕ್ಕವರಾದರೂ ಅವರಿಗೇನಾದರೂ ಸಹಾಯ ಮಾಡಬಹುದಾ ಎಂದು ಯೋಚಿಸುತ್ತಿದ್ದರು.

**ಶ್ರೀ ಟಿ.ಎ. ಮೋಹನ್**
ನಿವೃತ್ತ ಪೊಲೀಸ್ ವರಿಷ್ಠಾಧಿಕಾರಿ, 1990

ಶಿಕ್ಷಣ ಕ್ಷೇತ್ರಕ್ಕೆ ಬಸಪ್ಪನವರ ಕೊಡುಗೆ ದೊಡ್ಡದು. ಅವರು ಯುವ ಸಮುದಾಯಕ್ಕೆ ಮಾಡಿದ ಕ್ಷೇಮಾಭಿವೃದ್ಧಿ-ಕಲ್ಯಾಣ ಕಾರ್ಯಕ್ರಮಗಳು ಮೆಚ್ಚುವಂತಹವು. ಅವರು ತಮ್ಮ ಜೀವಮಾನದಲ್ಲಿ ಮಾಡಿದ ಸಾಧನೆಯನ್ನು ನಾವೆಂದೆಂದಿಗೂ ಮರೆಯುವಂತಿಲ್ಲ.

**ಪ್ರೊ. ಪಿ ಪರಮಶಿವಯ್ಯ**
ವಿಶ್ರಾಂತ ಪ್ರಾಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾಲಯ, 1990

ಕೊಂಡಜ್ಜಿ ಬಸಪ್ಪನವರು ಸಮಾಜಕ್ಕೆ ಬಹಳ ಬೇಕಾದವರಾಗಿದ್ದರು. ರಾಜಕಾರಣಿಯಾಗಿ ಉತ್ತಮ ಕೆಲಸ ಮಾಡಿದ್ದಾರೆ. ಬಡ ಹಾಗೂ ದುರ್ಬಲ ವರ್ಗದವರ ಏಳಿಗೆಗೆ ಶ್ರಮಿಸಿದವರು ಬಸಪ್ಪ.

## ಶ್ರೀ ಮಾರ್ಗದ ಮಲ್ಲಪ್ಪ

ಹಿರಿಯ ಕಾಂಗ್ರೆಸ್ ಧುರೀಣರು ಹಾಗೂ ಮಾಜಿ ಸಚಿವರು

ಗ್ರಾಮೀಣಾಭಿವೃದ್ಧಿಗೆ ತಮ್ಮ ಇಡೀ ಜೀವಮಾನವನ್ನೇ ಮುಡಿಪಿಟ್ಟ ಶ್ರೀ ಕೊಂಡಜ್ಜಿ ಬಸಪ್ಪನವರನ್ನು ಎಲ್ಲರೂ ನಿರಂತರ ನೆನೆಯಬೇಕು.

## ಶ್ರೀ. ಕೆ.ಜಿ ಮಹೇಶ್ವರಪ್ಪ

ಮಾಜಿ ಸಂಸದರು, 1990

ಯಾವುದೇ ಪ್ರತಿಫಲಾಪೇಕ್ಷೆಗಳಿಲ್ಲದೆ ದೃಢಸಂಕಲ್ಪದಿಂದ ದೇಶ ಸೇವೆ ಮಾಡಲು ಜೀವಮಾನವಿಡೀ ಸೆಣಸಿದ ಸಮರ್ಥ ಸಾರ್ವಜನಿಕ ವ್ಯಕ್ತಿ ಕೊಂಡಜ್ಜಿ ಬಸಪ್ಪನವರು. ಅವರು "ಕಾಯಕವೇ ಕೈಲಾಸ" ಎಂಬ ತತ್ವವನ್ನು ನಂಬಿದ್ದರು. ಯಾವುದೇ ಹುದ್ದೆ ಹಾಗೂ ಅಧಿಕಾರಕ್ಕಾಗಿ ಬೆನ್ನು ಬಿದ್ದವರಲ್ಲ. ಯಾವಾಗಲೂ ನಗುತ್ತಾ, ಸಹಜವಾಗಿ, ಸರಳವಾಗಿ ಪೂರ್ವಾಗ್ರಹಗಳಿಲ್ಲದೆ ಇದ್ದವರು. ಸಾರ್ವಜನಿಕರ ಸೇವೆಯಲ್ಲಿ ತೊಡಗಿದ್ದ ಅವರು ಜನರೊಂದಿಗೆ ಕೆಲಸ ಮಾಡುವಾಗ ಕಿಂಚಿತ್ ಪೂರ್ವಾಗ್ರಹಗಳನ್ನಿಟ್ಟುಕೊಂಡವರಲ್ಲ.

## ಎ.ಆರ್. ಬದರಿನಾರಾಯಣ್

ಮಾಜಿ ಶಾಸಕರು, ಮಾಜಿ ಶಿಕ್ಷಣ ಸಚಿವರು, 1990

ಸಮಾಜ ಹಾಗೂ ಸಮುದಾಯಗಳ ಸೇವೆಗೆಂದೇ ತಮ್ಮ ಜೀವಮಾನವನ್ನು ಮುಡುಪಾಗಿಟ್ಟವರು. ಸಾರ್ವಜನಿಕ ಸೇವೆಗೆ ಅಗತ್ಯವಿರುವ ಕೆಲವು ಗುಣಗಳು ಅವರಿಗೆ ಮೈಗೂಡಿದ್ದವು. ನೈಜತೆ ಸರಳತೆ, ದೊಡ್ಡವರಿರಲಿ, ಚಿಕ್ಕವರಿರಲಿ ಎಲ್ಲರನ್ನೂ ಸಮಾನವಾಗಿ ಕಾಣುವ ಗುಣ, ಎಂದಿಗೂ ಸಿಟ್ಟು ಮಾಡಿಕೊಳ್ಳದ, ಕಡೆಯ ಪಕ್ಷ ಒಂದು ನೊಣಕ್ಕೂ ತೊಂದರೆ ಮಾಡದ ವ್ಯಕ್ತಿ ಕೊಂಡಜ್ಜಿ ಬಸಪ್ಪನವರು.

## ಡಾ.ಎಸ್.ಬಿ.ಕೌಶಿಕ್

ಜೀವಶಾಸ್ತ್ರಜ್ಞ, ಆಯುಕ್ತರು, ಸಂಶೋಧನೆ ಹಾಗೂ ಅಭಿವೃದ್ಧಿ ವಿಭಾಗ,
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ.

ಪ್ರಜಾಪ್ರಭುತ್ವದಲ್ಲಿ ರಾಜಕಾರಣಿಗಳು ಬಹಳ ಮಹತ್ವದ ಜವಾಬ್ದಾರಿ ಉಳ್ಳವರಾಗಿರುತ್ತಾರೆ. ಏಕೆಂದರೆ ಅವರು ಜನರ ಪ್ರತಿನಿಧಿಯಾಗಿ ಆಯ್ಕೆಯಾಗಿ ಬಂದವರು. ಕೊಂಡಜ್ಜಿ ಬಸಪ್ಪನವರ ರಾಜಕೀಯ ಜೀವನ ಅನುಕರಣೀಯವೂ ಆದರ್ಶಪ್ರಾಯವೂ ಆಗಿತ್ತು. ಅವರಿಂದ 'ಸಾರ್ವಜನಿಕ ಸಭ್ಯತೆ'ಯ ಕುರಿತು ಪಾಠ ಕಲಿಯಬಹುದಿತ್ತು. ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಅವರು ನಿಸ್ವಾರ್ಥವಾಗಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು. ಕೊಂಡಜ್ಜಿ ಬಸಪ್ಪನವರು ಮಲಗಿದ್ದಾಗಲೂ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಬಗೆಗೆ ಚಿಂತಿಸುತ್ತಿರುತ್ತಾರೇನೋ ಎಂದು ನಾನು ಬಹಳಷ್ಟು ಬಾರಿ ಅಂದುಕೊಂಡಿದ್ದೇನೆ.

**ಡಾ.ಗೊ.ರು. ಚನ್ನಬಸಪ್ಪ**

ಖ್ಯಾತ ಸಾಹಿತಿ ಹಾಗೂ ಜಾನಪದ ತಜ್ಞ

ನನ್ನ ಹಳೆಯ ಹಾಗೂ ಗೌರವಾನ್ವಿತ ಸ್ನೇಹಿತ ಶ್ರೀ ಕೊಂಡಜ್ಜಿ ಬಸಪ್ಪ, ಸಂಸದರು ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕರ್ನಾಟಕದ ಮುಖ್ಯ ಆಯುಕ್ತರು. ಹಲವು ಜವಾಬ್ದಾರಿಯುತ ಹುದ್ದೆಗಳಲ್ಲಿ ರಾಜ್ಯ ಹಾಗೂ ದೇಶಕ್ಕೆ ಬಹು ದೊಡ್ಡ ಸೇವೆ ಸಲ್ಲಿಸಿದ್ದಾರೆ.

**ಶ್ರೀ.ಡಿ.ದೇವರಾಜ ಅರಸು**
ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ, 1976

ಸಂಸದರಾದ ಕೊಂಡಜ್ಜಿ ಬಸಪ್ಪನವರು ಬಹಳ ವಿಶಿಷ್ಟ ನಾಯಕರು. ಅವರು ಶಿಕ್ಷಣ ತಜ್ಞರು, ಕಾರ್ಪೋರೇಟರ್, ಶಾಸಕರು, ಸಂಸದರು, ಕೇಂದ್ರದ ಉಪಸಚಿವರು ಇವೆಲ್ಲದಕ್ಕಿಂತ ಮಿಗಿಲಾದ ಸ್ಕೌಟ್ಸ್ ವ್ಯಕ್ತಿ. ಅವರ ಜೀವನದ ಮಹತ್ವಾಕಾಂಕ್ಷೆ ಎಂದರೆ ಜನಸಮಾನ್ಯರು ಹಾಗೂ ಸಮುದಾಯಗಳ ಸೇವೆಗೈಯ್ಯಬೇಕು ಎಂಬುದೇ ಆಗಿತ್ತು.

**ಶ್ರೀ ಬಿ.ಆರ್. ಭಗತ್**
ಮಾಜಿ ಸ್ಪೀಕರ್, ಲೋಕಸಭೆ, 1976

ಕೊಂಡಜ್ಜಿ ಬಸಪ್ಪನವರ ಸಾರ್ವಜನಿಕ ಜೀವನ ಸ್ವಾರ್ಥವಿಲ್ಲದ ಸೇವೆಯಾಗಿತ್ತು. ಅವರ ಪರಿಶುದ್ಧ ಹಾಗೂ ಸರಳ ಜೀವನ ಇತರರಿಗೆ ಮಾದರಿಯಾಗಿತ್ತು. ಗ್ರಾಮೀಣ ಪ್ರದೇಶಗಳ ಜನರ ಮೇಲಿದ್ದ ಅವರ ಪ್ರೀತಿ ಮತ್ತು ಅವರ ಸಮಸ್ಯೆಗಳನ್ನು ಬಗೆಹರಿಸಲು ಅವರಿಗಿದ್ದ ಕಾಳಜಿ ಬಡ ಜನರ ಹೃದಯ ಗೆದ್ದಿದೆ.

**ಹೆಚ್.ಎಂ. ಚನ್ನಬಸಪ್ಪ**
ಮಾಜಿ ಲೋಕೋಪಯೋಗಿ ಸಚಿವರು, 1976

ಕೊಂಡಜ್ಜಿ ಬಸಪ್ಪನವರ ಸೇವೆ ಕರ್ನಾಟಕಕ್ಕೆ ಸೀಮಿತವಾಗಿರಲಿಲ್ಲ, ಗಡಿಯನ್ನು ಮೀರಿ ಅನೇಕ ಪ್ರದೇಶಗಳಿಗೆ ಅವರ ಸೇವೆ ಸಂದಿದೆ. ಗ್ರಾಮೀಣ ಪ್ರದೇಶದ ಸಮುದಾಯಗಳ ಏಳಿಗೆಗೆ ಅವರು ಅರ್ಪಣಾ ಮನೋಭಾವದಿಂದ ಪರಿಶ್ರಮವಹಿಸಿದರು.

**ಶ್ರೀ ಎಸ್.ಎಂ.ಕೃಷ್ಣ**, 1976
**ಕಾಂಗ್ರೆಸ್ ಧುರೀಣರು**

ಸ್ಕೌಟ್ಸ್ ಚಳವಳಿಗೆ ಕೊಂಡಜ್ಜಿ ಅವರಂತೆ ಬೇರಾರೂ ಕೆಲಸ ಮಾಡಲಿಲ್ಲ. ಅವರು ಕರ್ನಾಟಕದ ಸ್ಕೌಟ್ಸ್ ಚಳವಳಿಯ ಶಿಲ್ಪಿ. ಅವರು ನಿಷ್ಠಾವಂತ ಕಾಂಗ್ರೆಸಿಗರಾಗಿದ್ದರು. ಅವರಿಗೆ ವಹಿಸಿದ ಜವಾಬ್ದಾರಿಗಳನ್ನು ಬಹಳ ಕಾಳಜಿಯಿಂದ ಅರ್ಪಣಾ ಮನೋಭಾವದಿಂದ ಮಾಡಿದರು.

**ಎಸ್. ನಿಜಲಿಂಗಪ್ಪ**
ಮಾಜಿ ಮುಖ್ಯಮಂತ್ರಿಗಳು

ಶ್ರೀ ಕೊಂಡಜ್ಜಿ ಬಸಪ್ಪನವರು ಒಬ್ಬ ಶ್ರೇಷ್ಠ ರಾಜನೀತಿ ತಜ್ಞ, ಕ್ರಿಯಾತ್ಮಕ ನಾಯಕ, ಸ್ವಾರ್ಥವಿಲ್ಲದ ಸಮಾಜ ಸೇವಕ, ಸಂಸದ. ಅವರು ವಿಭಿನ್ನ ಹುದ್ದೆಗಳಲ್ಲಿ ರಾಜ್ಯ ಹಾಗೂ ದೇಶದ ಸೇವೆಗೈದಿದ್ದಾರೆ.

**ಶ್ರೀ ಆರ್. ಗುಂಡೂರಾವ್**
ಮಾಜಿ ಮುಖ್ಯಮಂತ್ರಿಗಳು

ಶ್ರೀ ಕೊಂಡಜ್ಜಿ ಬಸಪ್ಪ ಅವರು ನನ್ನ 35 ವರ್ಷಗಳ ಸ್ನೇಹಿತರು. ನ್ಯಾಯಾಂಗ ಹಾಗೂ ಸಾರ್ವಜನಿಕ ಜೀವನ ಎರಡೂ ಕ್ಷೇತ್ರದಲ್ಲಿ ಅವರನ್ನು ಗಮನಿಸಿದ್ದೇನೆ. ಎರಡೂ ಕ್ಷೇತ್ರದಲ್ಲಿ ಅವರ ಬೆಳವಣಿಗೆಯ ಬಗೆಗೆ ಸಂತೋಷವಿದೆ. ಅವರ ಆತ್ಮೀಯತೆಯಿಂದ ಬಹಳಷ್ಟು ಮಂದಿ ಅವರ ಹತ್ತಿರವಾಗುತ್ತಿದ್ದರು. ಬಹಳ ಬೇಗ ಹೆಚ್ಚು ಪ್ರಸಿದ್ಧರಾದರು. ರಾಜಕಾರಣದಲ್ಲಿ ಹೆಚ್ಚಾಗಿ ತೊಡಗಿಸಿಕೊಂಡರು. ಶಾಸಕನಾಗಿ, ಸಂಸದನಾಗಿ ಮತ್ತು ಕೇಂದ್ರ ಉಪಸಚಿವರಾಗಿ ಅವರ ಸೇವೆಯ ಬಗ್ಗೆ ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ತಮ್ಮ ಸುತ್ತಮುತ್ತ ಅಸಹನೆ ಹಾಗೂ ಹೊಟ್ಟೆಕಿಚ್ಚಿನ ಮಂದಿಯಿಂದ ದೂರವಿದ್ದು, ಎದುರಾಗುವ ಸಮಸ್ಯೆಗಳನ್ನು ತಂತ್ರಗಾರಿಕೆಯಿಂದ ಬಗೆಹರಿಸಿಕೊಳ್ಳದೆ ಇದ್ದಲ್ಲಿ ರಾಜಕಾರಣದ ಅಖಾಡದಲ್ಲಿ ಹೆಚ್ಚು ಕಾಲ ಉಳಿಗಾಲವಿಲ್ಲ. ಕೊಂಡಜ್ಜಿ ಬಸಪ್ಪನವರ ವಿಷಯದಲ್ಲಿ ಆದದ್ದು ಅದೇ. ಮಂತ್ರಿ ಪದವಿಯಿಂದ ಬಹಳ ಬೇಗ ಅವರು ಹೊರಗೆ ಬಂದರೂ, ಪ್ರತಿಯೊಬ್ಬರಿಗೂ ಅವರ ಬಗ್ಗೆ ಅನುಕಂಪವಿತ್ತು, ಅವರ ಒಳ್ಳೆಯ ನಡವಳಿಕೆ ಹಾಗೂ ಗುಣಗಳಿಗಾಗಿ ಅವರನ್ನು ಹಾಡಿಹೊಗಳುತ್ತಿದ್ದರು. ಜನರ ಕಷ್ಟ ನಿಷ್ಠೂರಗಳಿಗೆ ಅವರು ಸ್ಪಂದಿಸುತ್ತಿದ್ದದ್ದು ಅದಕ್ಕಾಗಿ ಅವರು ತೆಗೆದುಕೊಳ್ಳುತ್ತಿದ್ದ ನೋವು ಮತ್ತು ಅರ್ಪಣಾ ಮನೋಭಾವದಿಂದ ಕೆಲಸ ಮಾಡುತ್ತಿದ್ದದ್ದು ಎಲ್ಲರಿಗೂ ಇಷ್ಟವಾಗಿತ್ತು.

**ಶ್ರೀ ಡಿ.ಎಚ್. ಚಂದ್ರಶೇಖರಯ್ಯ**
ಮಾಜಿ ಸಚಿವರು, 1976

ಕೊಂಡಜ್ಜಿ ಅವರು ಸ್ಕೌಟ್ಸ್ ಅನ್ನು ರಾಜಕೀಯದೊಳಗೆ ಬೆರೆಸಲಿಲ್ಲ. ಸ್ಕೌಟ್ಸ್‌ಗೆ ಏನು ಕೊಡಬೇಕು, ಸಾರ್ವಜನಿಕ ಜೀವನ, ರಾಜಕೀಯಕ್ಕೆ ಏನು ಕೊಡಬೇಕು ಎಂಬುದನ್ನು ಅರಿತು ಕೊಡುತ್ತಿದ್ದ ಒಬ್ಬ ವಿಶೇಷ ವ್ಯಕ್ತಿ ಅವರು.

**ಶ್ರೀ ಕಂದಗಲ್ಲು ಶಂಕರಪ್ಪ**

ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಹರಿಹರ ತಾಲ್ಲೂಕಿನ ಕೊಂಡಜ್ಜಿಯ ಬಳಿ ಇರುವ ಸ್ಕೌಟ್ಸ್ ತರಬೇತಿ ಕೇಂದ್ರದ ಯಶೋಗಾಥೆಯ ಹಿಂದಿನ ಶಕ್ತಿ ತಮ್ಮ ಇಡೀ ಜೀವಮಾನ ಇದಕ್ಕಾಗಿ ಬೆವರು ಹರಿಸಿ ಎಡಬಿಡದೆ ನಿರಂತರ ಕೆಲಸ ಮಾಡಿ ರೂಪಕೊಟ್ಟವರು ಬೇರಾರೂ ಅಲ್ಲ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕರ್ನಾಟಕದ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಸಪ್ಪನವರು.

**ಡಾ. ಎಸ್. ಬಿ. ಕೌಶಿಕ್**
ಕೇಂದ್ರ ಕಚೇರಿಯ ಸಂಶೋಧನಾ ಹಾಗೂ ಅಭಿವೃದ್ಧಿ ವಿಭಾಗದ ಆಯುಕ್ತರು, ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ

ಒಂದು ದಶಕದ ಹಿಂದೆ ಅಥವಾ ಐದಾರು ವರ್ಷಗಳ ಹಿಂದೆ ಕೊಂಡಜ್ಜಿ ಕ್ಯಾಂಪ್ ಸೈಟ್ ನೋಡಿದವರು ಇಲ್ಲಿ ಕೆಲಸ ಮಾಡುವುದು ದುಸ್ಸಾಹಸವೇ ಸರಿ ಎಂದುಕೊಂಡಿದ್ದರು. ಕೊರಕಲು ಬೋಳುಗುಡ್ಡಗಳ ಪಾಳು ಭೂಮಿ ಇದಾಗಿತ್ತು. ಹಿಂದೆ ಭೇಟಿ ಮಾಡಿ ದುಸ್ಸಾಹಸ ಎಂದುಕೊಂಡವರು ಈಗ ಬಂದಲ್ಲಿ ಇಲ್ಲಿನ ಪ್ರಕೃತಿ ಸೌಂದರ್ಯಕ್ಕೆ ಮಾರುಹೋಗುತ್ತಾರೆ. ಅಂಥದೊಂದು ರೂಪಾಂತರ ಇಲ್ಲಾಗಿದೆ.

**ಡಾ. ಎಸ್. ಬಿ. ಕೌಶಿಕ್**
ಕೇಂದ್ರ ಕಚೇರಿಯ ಸಂಶೋಧನಾ ಹಾಗೂ ಅಭಿವೃದ್ಧಿ ವಿಭಾಗದ ಆಯುಕ್ತರು, ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ

# ಗೋಪುರ

ವಾಸ್ತವವಾದಿಗಳು ಎರಡು ವರ್ಗದವರಿರುತ್ತಾರೆ: ಒಂದು ನೇರವಾದವರು ಮತ್ತೊಂದು ವರ್ಗ ಭಾವಜೀವ ಪಂಥದವರು ಅಥವಾ ರಮ್ಯವಾದಿಯಾಗಿರುತ್ತಾರೆ. ಒಬ್ಬ ನೀರಸನಾಗಿದ್ದರೆ ಮತ್ತೊಬ್ಬ ಕಾವ್ಯಮಯವಾಗಿರುತ್ತಾನೆ. ಉದಾಹರಣೆಗೆ ಒಂದು ದೊಡ್ಡ ಉಕ್ಕಿನ ಗೋಪುರವನ್ನು ಪುಕ್ಕಟೆಯಾಗಿ ತೆಗೆದುಕೊಂಡು ಹೋಗಲು ಅವಕಾಶ ಕಲ್ಪಿಸಿದರೆ ಅದನ್ನು ಕೊಡುತ್ತಿರುವವನಿಗೆ "ನಾನು ಅದನ್ನು ಒಳ್ಳೆಯ ಲಾಭಕ್ಕೆ ಮಾರುತ್ತೇನೆ ನನಗೆ ಅವಕಾಶ ಕೊಡಿ, ಅದೇ ದುಡ್ಡಿನಲ್ಲಿ ಇಲ್ಲಿನ ನೆಲ ಸಮಮಾಡಿಸಿ ಒಂದೆರಡು ಕೊಠಡಿ ಕಟ್ಟಿಸಬಹುದು" ಎನ್ನುತ್ತಾನೆ. ಅದಕ್ಕೆ ಸಹಜವಾಗಿಯೇ ಅವಕಾಶ ಕಲ್ಪಿಸಲಿಲ್ಲ. ಒಬ್ಬ ಕಲ್ಪನಾ ಲೋಕದ ವಾಸ್ತವವಾದಿ, ಅದನ್ನು ತನ್ನ ಕ್ಯಾಂಪ್ ಸೈಟ್‌ಗೆ ಕೊಂಡೊಯ್ಯುತ್ತಾನೆ, ೬೦ ಅಡಿಯ ಗೋಪುರವನ್ನು ನಿಲ್ಲಿಸುತ್ತಾನೆ. ಹಿರಿಯರಿಗೆ ಅದೊಂದು ಬೆರಗು ತರುವ ಕೆಸಲವಾಗಿಯೂ ಯುವ ಸಮುದಾಯಕ್ಕೆ ಅದೊಂದು ಸವಾಲಿನ ಕೆಲಸವಾಗಿಯೂ ಕಾಣತೊಡಗುತ್ತದೆ.

**ಪ್ರೊ. ಎಸ್. ವಿ. ರಂಗಣ್ಣ**
ಸಾಹಿತಿಗಳು ಮತ್ತು ವಿಶ್ರಾಂತ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾಲಯ, 1976

# ಕೆ. ಬಸಪ್ಪ

ಪ್ರತಿಯೊಬ್ಬರಿಗೂ ಸಹೃದಯಿ, ಯಾರೆಂದು ಊಹಿಸಿಕೊಳ್ಳಿ?
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಗೆ ಉಪಕಾರಿ
ಸಮರ್ಥ ಆಡಳಿತಗಾರ
ನಿಸ್ಪೃಹ ಮತ್ತು ನಿಸ್ವಾರ್ಥ ಎಂದಿಗೂ
ಮಾತಿನಲ್ಲಿ ಪ್ರೀತಿಪೂರ್ವಕ ಮತ್ತು ಕಾಯಕದಲ್ಲಿ ಉದಾತ್ತ
ದೀರ್ಘ ಕಾಲದ ರಾಜಕಾರಣಿ
ಸ್ಕೌಟ್ಸ್ ಮತ್ತು ಗೈಡ್ಸ್‌ನ ಬೆಳೆಸಿದವ
ಸರ್ವತ್ರರಾದವರು ಎಂದೆಂದಿಗೂ..,

**ಹಮೀದ ರೆಹಮಾನ್**
ರಾಜ್ಯ ಗೈಡ್ಸ್ ಸಂಘಟನಾ ಆಯುಕ್ತರು, 1976

ಸಮಸ್ಯೆಗಳ ಸುಳಿಯಲ್ಲಿದ್ದಾಗ, ಆಗಿಂದಾಗಲೇ ಅದನ್ನು ಬಗೆಹರಿಸಿಕೊಳ್ಳಬೇಕು, ಉತ್ತರ ಸಿಗುವವರೆಗೆ ಅವಿಶ್ರಾಂತವಾಗಿ ಕೆಲಸ ಮಾಡುತ್ತಿದ್ದರು, ತಡ ಮಾಡುವುದನ್ನು ಎಂದಿಗೂ ಸಹಿಸುತ್ತಿರಲಿಲ್ಲ. ದೆಹಲಿ,ದಾವಣಗೆರೆ ಅಥವಾ ಬೆಂಗಳೂರು ಎಲ್ಲೇ ಇರಲಿ ಕೆಲಸ ಆಗಬೇಕಿತ್ತು. ಬೆಳ್ಳಂಬೆಳಗ್ಗೆಯೇ ರಾಜ್ಯ ಕಾರ್ಯದರ್ಶಿ ಹಾಗೂ ರಾಜ್ಯ ಸಂಘಟನಾ ಆಯುಕ್ತರಿಗೆ ಫೋನ್ ಕರೆ ಬರುತ್ತಿತ್ತು. ಕೆಲಸಗಳು ಹೇಗೆ ನಡೆಯುತ್ತಿವೆ, ಮುಂದೇನಾಗಬೇಕು ಎಂಬ ಒಕ್ಕಣೆಯಲ್ಲಿ ಮಾತುಕತೆ ಇರುತ್ತಿತ್ತು. ನಾವೇನು ಮಾಡಬೇಕು ಎಂದು ಹೇಳುವುದರ ಜೊತೆಗೆ ಎಲ್ಲವೂ ಸರಾಗವಾಗಿ ನಡೆಯಬೇಕಾದರೆ ತಾನೇನು ಮಾಡಬೇಕೆಂದು ಬಯಸುವಿರಿ ಎಂದೂ ಕೇಳುತ್ತಿದ್ದರು.

**ಶ್ರೀ ಎ.ಡಿ. ಆನಂದನ್**, 1976
ನಿವೃತ್ತ ಪೊಲೀಸ್ ವರಿಷ್ಠಾಧಿಕಾರಿ, ರಾಜ್ಯ ಕಾರ್ಯದರ್ಶಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

ಕರ್ನಾಟಕದಲ್ಲಿ ಹೇಳ ಹೆಸರಿಲ್ಲದ ಸಾವಿರಾರು ಹಳ್ಳಿಗಳಲ್ಲಿ ಕೊಂಡಜ್ಜಿಯೂ ಒಂದು. ಕರ್ನಾಟಕದಲ್ಲಿ ಬಸಪ್ಪ ಎಂಬ ಹೆಸರೂ ಬಹಳ ಸಾಮಾನ್ಯವಾಗಿ ಇರುವಂತದ್ದೇ. ಆದರೆ ಈ ಎರಡೂ ಹೆಸರುಗಳು ಒಟ್ಟಿಗೆ ಸೇರಿ ಒಂದು ವಿಶಿಷ್ಟ ವ್ಯಕ್ತಿತ್ವವನ್ನು ರೂಪಿಸಿದವು. ದೊಡ್ಡ ದೊಡ್ಡ ಕ್ಲಿಷ್ಟಕರ ಯೋಜನೆಗಳನ್ನು ಕನಸುವುದು ಮತ್ತು ಅದನ್ನು ಆಗುಮಾಡುವುದು ಅವರಿಂದ ಕಲಿಯಬಹುದು. ಅವರೊಂದು ದೊಡ್ಡ ಅದ್ಭುತವೇ ಸರಿ.

**ಪ್ರೊ. ಎಸ್.ವಿ.ರಂಗಣ್ಣ**
ಸಾಹಿತಿಗಳು, ವಿಶ್ರಾಂತ ಪ್ರಾಧ್ಯಾಪಕರು ಮೈಸೂರು ವಿಶ್ವವಿದ್ಯಾಲಯ

ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ
ಕೂಡಲಸಂಗಮದೇವಾ ಕೇಳಯ್ಯಾ

—ಬಸವಣ್ಣ

ಕೊಂಡಜ್ಜಿ ಬಸಪ್ಪನವರನ್ನು ಕಂಡಿರುವ ಪ್ರತಿಯೊಬ್ಬರಿಗೂ ಅವರು ಸ್ಕೌಟ್ಸ್ ಮತ್ತು ಗೈಡ್ಸ್ ಸಮವಸ್ತ್ರಧಾರಿಯಾಗಿರುವುದು ಕಣ್ಣ ಮುಂದೆ ಸುಳಿಯುತ್ತದೆ. ಬಹಳ ನೀಟಾದ ಖಾಕಿ ಅಂಗಿ, ಅದರ ಮೇಲೆ 1930 ರಿಂದ ಸನ್ಮಾನ್ಯರು ಪಡೆದ ಪ್ರಶಸ್ತಿಗಳು ಹಾಗೂ ಅವರ ಸ್ಕೌಟ್ಸ್ ಸ್ಥಾನಮಾನವನ್ನು ಕಾಣಿಸುವ ಬ್ಯಾಡ್ಜ್‌ಗಳ ಅಲಂಕಾರ, ಕತ್ತು ಸುತ್ತುವರೆದ ಸ್ಕಾರ್ಫ್, ಖಾಕಿ ನಿಕ್ಕರ್, ಕಪ್ಪು ಬಣ್ಣದ ಶೂ, ಮೊಣಕಾಲಿನವರೆಗೆ ಸಾಕ್ಸ್, ಸೈಡ್ ಕ್ಯಾಪ್. ಇದು ಶ್ರೀಯುತರ ಗೆಟಪ್.

ಸನ್ಮಾನ್ಯರು ಹುಟ್ಟಿದ ಊರು ಕೊಂಡಜ್ಜಿಯಲ್ಲಿ ಕುರಚಲು ಗುಡ್ಡಗಳಿಂದ ಕೂಡಿದ್ದ 80 ಎಕರೆ ಪ್ರದೇಶವನ್ನು ಸ್ಕೌಟ್ಸ್ ಕ್ಯಾಂಪ್ ಆಗಿ ಪರಿವರ್ತಿಸಿದ್ದು ಶ್ರೀಯುತರ ಬಹಳ ದೊಡ್ಡ ಸಾಧನೆ ಎಂದು ಎಲ್ಲರೂ ಇಂದಿಗೂ ಸ್ಮರಿಸಿಕೊಳ್ಳುತ್ತಾರೆ. ಕೊಂಡಜ್ಜಿ ಬಸಪ್ಪನವರಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಕೆಲಸವನ್ನು ಒಂದು ಧರ್ಮದ ಕೆಲಸವದು ಅಥವಾ ತಮ್ಮ ಆದ್ಯ ಕರ್ತವ್ಯವೆಂದೇ ಮಾಡಿದವರು. ಅದೇ ಶಿಸ್ತು ಮತ್ತು ಕಾಯಕ ಶ್ರದ್ಧೆ ಶ್ರೀಯುತರಿಗೆ ವಕೀಲ ವೃತ್ತಿ ಹಾಗೂ ರಾಜಕಾರಣಿಯಾಗಿ ಯಶ ಕಾಣಲು ಕಾರಣವಾಯಿತು. ಸ್ಕೌಟ್ಸ್ ಚಳವಳಿಯಲ್ಲಿ ಆರಂಭದ ದಿನಗಳಲ್ಲಿದ್ದ ಕೊಂಡಜ್ಜಿ ಬಸಪ್ಪನವರ ಸಾಧನೆಗಳ ಬಗೆಗೆ ಕೊಂಚವೇ ಮಾಹಿತಿ ಲಭ್ಯವಿದೆ.

ಸನ್ಮಾನ್ಯರ ಆತ್ಮ ಚರಿತ್ರೆಯಲ್ಲಿ ಮುದೇನೂರು ಸಂಗಣ್ಣ ದಾಖಲಿಸುವಂತೆ; ಬಸಪ್ಪನವರ ಸ್ನೇಹಿತ ಹೇಳುವಂತೆ ಸ್ಕೌಟ್ಸ್ ಕ್ಯಾಂಪ್‌ಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಬಸಪ್ಪನವರು ಕೋಲೇಬಸವನ ಪಾತ್ರ ಮಾಡುತ್ತಿದ್ದರು. 1941 ರಲ್ಲಿ ಬಸಪ್ಪನವರು ನ್ಯಾಯವಾದಿಯಾಗಿ ತಮ್ಮ ವೃತ್ತಿ ಪ್ರಾರಂಭಿಸಿದರು. ಆಗಿನಿಂದ ಸ್ಕೌಟ್ಸ್ ಕೆಲಸವನ್ನು ಹೆಚ್ಚು ಮುತುವರ್ಜಿಯಿಂದ ಮುನ್ನಡೆಸಲು ಪಣತೊಟ್ಟರು. ಬಸಪ್ಪನವರ ಹತ್ತಿರದ ಗೆಳೆಯರಾದ ದಾವಣಗೆರೆ ಮೂಲದ ಡಾ.ಶಂಕರಪ್ಪ ಮತ್ತು ಜಯಣ್ಣ ಚಿಗಟೇರಿ ಅವರೊಂದಿಗೆ ಬಸಪ್ಪನವರು ಏಳನೆಯ ವಿಶ್ವ ಸ್ಕೌಟ್ಸ್ ಜಂಬೂರಿಗಳಿಗೆ ಭೇಟಿ ಕೊಟ್ಟಿದ್ದರು. ಜಯಣ್ಣ ಚಿಗಟೇರಿಯವರ ಮಗ ಜಯಪ್ರಕಾಶ್ ಚಿಗಟೇರಿ ಅವರು ಆಗಿನ ದಾವಣಗೆರೆಯ ಬಹಳ ಪ್ರಸಿದ್ಧ ಹಾಗೂ ದೊಡ್ಡ ಜವಳಿ ಕಾರ್ಖಾನೆ ನಿರ್ದೇಶಕರಾಗಿದ್ದರೂ ಸಹ ತಾನು ಕೊಂಡಜ್ಜಿ ಬಸಪ್ಪನವರ ಕಾರು ಚಾಲಕನಾಗಿದ್ದೆ ಎಂದು ನಿಸ್ಸಂಕೋಚವಾಗಿ ಹೇಳುತ್ತಾ, ಕೊಂಡಜ್ಜಿ ಬಸಪ್ಪನವರು ತಾವು ಶಾಸಕರಾಗಿದ್ದಾಗ, ಸಂಸದರಾಗಿದ್ದಾಗಲೂ ಕ್ಯಾಂಪ್ ಸೈಟ್‌ಗೆ ಬಂದಾಗ ಅವರು ನಡೆದುಕೊಳ್ಳುತ್ತಿದ್ದ ರೀತಿ ನನಗೀಗಲೂ ಆಶ್ಚರ್ಯವಾಗುತ್ತದೆ ಎಂದು ಹೇಳುತ್ತಾರೆ. " ಒಮ್ಮೆ ಮನೆಗೆ ಬಂದು,



‘ಬನ್ನಿ ಕ್ಯಾಂಪ್ ಸೈಟ್‌ಗೆ ಹೋಗೋಣ ಎಂದರು,’ ‘ಕಾರು ಸರ್ವೀಸ್‌ಗೆ ಕಳುಹಿಸಿರುವುದಾಗಿ ಹೇಳಿದೆ.’ ನನ್ನ ಬೈಕ್‌ನಲ್ಲೇ ಕೊಂಡಜ್ಜಿ ಸ್ಕೌಟ್ಸ್ ಕ್ಯಾಂಪ್ ಕಡೆಗೆ ಹೋದೆವು. ಅಲ್ಲಿ ಕಾಯುತ್ತಿದ್ದ ಇಂಜಿನಿಯರ್‌ಗಳು ಮೋಟಾರ್ ಸೈಕಲ್ ಮೇಲೆ ಬಂದ ಸಂಸದ ಬಸಪ್ಪನವರನ್ನು ನೋಡಿ ಅವಾಕ್ಕಾದರು.” ಅವರು ಯಾವಾಗಲೂ ಚಿತ್ರದುರ್ಗದಿಂದ ದಾವಣಗೆರೆಗೆ ಬಸ್ಸಿನಲ್ಲೇ ಬರುತ್ತಿದ್ದರು. ಅವರ ಬಳಿ ಆಗ ಕಾರು ಇರಲಿಲ್ಲ. ಅವರು ಬಸ್ ನಿಲ್ದಾಣದಿಂದ ನನಗೆ ಕರೆ ಮಾಡಿ ಕಾರು ತರಲು ಹೇಳುತ್ತಿದ್ದರು. ನಾನು ಹೋಗುವಷ್ಟರಲ್ಲಿ ಅರ್ಧ ದಾರಿ ನಡೆದೇ ಬಂದಿರುತ್ತಿದ್ದರು, ಮಾರ್ಗ ಮದ್ಯದಲ್ಲೇ ಅವರನ್ನು ಕಾರಿನಲ್ಲಿ ಕುಳ್ಳಿರಿಸಿಕೊಳ್ಳಬೇಕಿತ್ತು. ಬಹಳ ಸಾರಿ ನಾನವರ ಗಾಂಧಿ ಟೊಪ್ಪಿಯನ್ನು ಮಾರ್ಗಮದ್ಯದಲ್ಲಿ ಕಾಣುವಷ್ಟರಲ್ಲಿ ಅರ್ದಕ್ಕಿಂತ ಹೆಚ್ಚು ದಾರಿ ಕ್ರಮಿಸಿರುತ್ತಿದ್ದರು ಎಂದು ನಸುನಗುತ್ತಾ ನೆನಪಿಸಿಕೊಳ್ಳುತ್ತಾರೆ.

ಕೊಂಡಜ್ಜಿ ಬಸಪ್ಪನವರ ನಿಕಟವರ್ತಿ ಹೆಚ್.ವೈ. ರಾಮಯ್ಯನವರು ಹೇಳುವಂತೆ ಕರ್ನಾಟಕದಲ್ಲಿ ನಿಷ್ಕ್ರಿಯವಾಗಿದ್ದ ಹಲವು ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಕೇಂದ್ರಗಳನ್ನು ಕ್ರಿಯಾಶೀಲವಾಗುವಂತೆ ಮಾಡಿದ್ದು ಕೊಂಡಜ್ಜಿ ಬಸಪ್ಪನವರು. ರಾಮಯ್ಯನವರು ತುಮಕೂರಿನ ಕಾಲೇಜಿನ ವಿದ್ಯಾರ್ಥಿಯಾಗಿ 1956 ರ ರಾಜ್ಯ ಮಟ್ಟದ ಜಾಂಬೂರೇಟ್‌ನಲ್ಲಿ ಕೊಂಡಜ್ಜಿ ಬಸಪ್ಪನವರನ್ನು ಮೊದಲಿಗೆ ಕಂಡದ್ದು. ಅದಾಗ ಕೊಂಡಜ್ಜಿ ಅವರು ಚಿತ್ರದುರ್ಗ ವಿಭಾಗದ ಸ್ಕೌಟ್ಸ್‌ಗೆ ಸಹಾಯಕ ಆಯುಕ್ತರಾಗಿದ್ದರು.

10 ವರ್ಷಗಳ ನಂತರ ರಾಮಯ್ಯನವರು ಚಿಕ್ಕಮಗಳೂರಿನ ಸರ್ಕಾರಿ ಪ್ರೌಢಶಾಲೆಯ ಶಿಕ್ಷಕರಾಗಿ ಹಾಗೂ ಸ್ಕೌಟ್ಸ್ ಮಾಸ್ಟರ್ ಆಗಿ ಚಿಕ್ಕಮಗಳೂರಿನಲ್ಲಿ ನಿಷ್ಕ್ರಿಯವಾಗಿದ್ದ ಸ್ಕೌಟ್ಸ್ ಕೇಂದ್ರವನ್ನು ಶ್ರಮವಹಿಸಿ ಕ್ರಿಯಾಶೀಲವಾಗಿಸಿದ್ದರು. ಅದಾಗ ಜಿಲ್ಲಾ ಮಟ್ಟದ ಸ್ಕೌಟ್ಸ್ ರ್‍ಯಾಲಿ ಸಂಘಟಿಸಬೇಕೆಂಬ ಆಶೆಯೊಂದಿಗೆ ಕೊಂಡಜ್ಜಿ ಬಸಪ್ಪನವರನ್ನು ಆಹ್ವಾನಿಸಲು ಬೆಂಗಳೂರಿಗೆ ಬಂದಿದ್ದರು. ಕೊಂಡಜ್ಜಿ ಬಸಪ್ಪನವರು; ಕ್ಯಾಂಪ್‌ನಲ್ಲಿ ಟೆಂಟ್‌ಗಳ ಚಟುವಟಿಕೆ ಇದ್ದಲ್ಲಿ ಮಾತ್ರ ಬರುವುದಾಗಿ ಹೇಳಿದರು. ರಾಮಯ್ಯನವರು ಆ ಮಾತನ್ನು ಸವಾಲಾಗಿ ತೆಗೆದುಕೊಂಡರು. ಕೊಂಡಜ್ಜಿ ಬಸಪ್ಪನವರು ಬಂದು ನೋಡಿದಾಗ ಅಲ್ಲಿ ಕೇವಲ ಟೆಂಟ್‌ಗಳನ್ನಷ್ಟೇ ಸಿದ್ಧ ಮಾಡಿರಲಿಲ್ಲ, ಸಂಪೂರ್ಣ ಸ್ಕೌಟ್ಸ್ ಕ್ಯಾಂಪ್‌ನ ಚಟುವಟಿಕೆಗಳನ್ನು ಯುವ ವಿದ್ಯಾರ್ಥಿ ವಿದ್ಯಾರ್ಥಿನಿಯರಿಂದಲೇ ನಡೆದುಕೊಂಡು ಹೋಗುವಂತೆ ವ್ಯವಸ್ಥೆ ಮಾಡಿದ್ದರು, ಅದೂ ಕೂಡಾ ಸ್ಕೌಟ್ಸ್ ಮಾಸ್ಟರ್‌ಗಳ ಸಹಾಯವೂ ಇಲ್ಲದೆ. ಆ ಸಂಘಟನೆಯನ್ನು ಕೊಂಡಜ್ಜಿ ಬಸಪ್ಪ ಬಹಳ ಇಷ್ಟಪಟ್ಟಿದ್ದರು. ಆ ಜಿಲ್ಲಾ ಕ್ಯಾಂಪ್‌ಗೆ ಬಹಳ ನಿಷ್ಟ ಜಿಲ್ಲಾ ಸ್ಕೌಟ್ಸ್ ಕಮೀಷನರ್ ಆಗಿದ್ದ ಹೆಚ್. ವೆಂಕಟರಾಮಯ್ಯನವರ ಹೆಸರಿನಲ್ಲಿ ಹಮ್ಮಿಕೊಂಡಿದ್ದನ್ನು ಕಂಡು ಬಹಳ ಭಾವುಕರಾಗಿದ್ದರು. ಮಂತ್ರಿಯಾಗಿದ್ದ ಅವರು ಎಲ್ಲಾ ಕಾರ್ಯಕ್ರಮಗಳನ್ನು ಎರಡು ದಿವಸಗಳ ಕಾಲ ಸ್ಥಗಿತಗೊಳಿಸಿ ಎರಡೂ ದಿನ ಬೆಳಿಗ್ಗೆಯಿಂದ ಸಂಜೆಯವರೆಗೆ ಸ್ಕೌಟ್ಸ್ ಕ್ಯಾಂಪ್ ಚಟುವಟಿಕೆಗಳಲ್ಲಿ ಭಾಗವಹಿಸಿದರು. ಆ ಕ್ಯಾಂಪ್ ಕಂಡಮೇಲೆ ರಾಜ್ಯ ಸಂಘಟನಾ ಆಯುಕ್ತರಾಗಿ ರಾಮಯ್ಯನವರನ್ನು ಆಯ್ಕೆ ಮಾಡಿದರು. ಆಗ 25 ವರ್ಷದ ಯುವಕ ರಾಮಯ್ಯನವರು ಬಹಳ ಹಿಂಜರಿಕೆಯಿಂದ ಆ ಹುದ್ದೆಯನ್ನು ಸ್ವೀಕರಿಸಿದರು. ಕೇಂದ್ರ ಕಚೇರಿಯಲ್ಲಿರಬಹುದಾದ ರಾಜಕಾರಣಗಳನ್ನು ನಿಭಾಯಿಸುವುದು ಹೇಗೆ ಎಂಬುದು ಅವರ ಆತಂಕವಾಗಿತ್ತು. ನಿಜಲಿಂಗಪ್ಪನವರ ಸರ್ಕಾರದಲ್ಲಿ ಶಾಸಕರಾಗಿದ್ದ ಕೊಂಡಜ್ಜಿ ಬಸಪ್ಪನವರು ಯುವಕ ರಾಮಯ್ಯನವರಲ್ಲಿದ್ದ ಅಳುಕುಗಳನ್ನು ನಿವಾರಿಸಿ ಇಡೀ ದೇಶದಲ್ಲೇ ಅತಿ ಚಿಕ್ಕ ವಯಸ್ಸಿನ ಸಂಘಟನಾ ಆಯುಕ್ತರನ್ನಾಗಿ ನೇಮಕ ಮಾಡಿಬಿಟ್ಟಿದ್ದರು. ಕೊಂಡಜ್ಜಿ ಬಸಪ್ಪನವರ ಕಾರಣಕ್ಕಾಗಿಯೇ ಬೆಂಗಳೂರಿನಲ್ಲಿ ಹೊರಗಿನವರಿಗೂ ರಾಜ್ಯ ಮಟ್ಟದ ಹುದ್ದೆಗಳು ಲಭ್ಯವಾಗುತ್ತಿದ್ದವು ಎಂದು ರಾಮಯ್ಯನವರು ಸ್ಮರಿಸಿಕೊಳ್ಳುತ್ತಾರೆ. ಅದಕ್ಕೂ ಮುನ್ನ ನಗರ ಪ್ರದೇಶದ ಲಾಬಿ ಯಾವ ಮಟ್ಟಗಿತ್ತೆಂದರೆ ಕೊಂಡಜ್ಜಿ ಬಸಪ್ಪನವರು



ಮಂತ್ರಿಯಾಗಿದ್ದಾಗಲೂ ಅವರಿಗೆ ರಾಜ್ಯ ಕಾರ್ಯದರ್ಶಿ ಹುದ್ದೆ ಅರಸಿ ಬಂದಾಗ ಪ್ರತಿರೋದ ಒಡ್ಡಿದ ಪ್ರಸಂಗಗಳಿದ್ದವು. ಆದರೆ ಅವರ ಅರ್ಪಣಾ ಮನೋಭಾವ ಹಾಗೂ ವರ್ಚಸ್ಸಿನಿಂದ ಎಲ್ಲರ ಹೃದಯ ಗೆದ್ದಿದ್ದರು. ಸ್ಕೌಟ್ಸ್ ಚಟುವಟಿಕೆಗಳಿಗೆ ತರಬೇತುದಾರರೇ ಮುಖ್ಯ. ಆದರೆ 1968 ರಲ್ಲಿ ಇಡೀ ರಾಜ್ಯಕ್ಕೆ ಸುಮಾರು ಹತ್ತನ್ನೆರಡು ಮಂದಿ ತರಭೇತುದಾರರಷ್ಟೇ ಇದ್ದದ್ದು ಎಂಬುದನ್ನು ರಾಮಯ್ಯ ನೆನಪಿಸಿಕೊಳ್ಳುತ್ತಾರೆ. ಕೊಂಡಜ್ಜಿ ಬಸಪ್ಪನವರು ಸ್ಕೌಟ್ಸ್ ಚಟುವಟಿಕೆಗಳಲ್ಲಿ ತೆಗೆದುಕೊಳ್ಳುತ್ತಿದ್ದ ತತ್‌ಕ್ಷಣದ ತೀರ್ಮಾನಗಳ ಬಗೆಗೆ ಎಲ್ಲರೂ ಮಾತನಾಡಿಕೊಳ್ಳುವುದನ್ನು ಒಪ್ಪಿಕೊಳ್ಳುವ ರಾಮಯ್ಯನವರು ತರಬೇತುದಾರರು ತುಂಬಾ ಕಡಿಮೆ ಇದ್ದ ಸಂದರ್ಭ ಹಾಗೂ ಬೇಡಿಕೆ ಹೆಚ್ಚಿದ್ದ ಕಾಲದ ಒಂದು ಘಟನೆಯನ್ನು ನೆನೆಯುತ್ತಾರೆ.

ಒಮ್ಮೆ ಮಂಗಳೂರಿನಲ್ಲಿ ನಡೆಯಬೇಕಿದ್ದ ಕ್ಯಾಂಪ್‌ಗೆ ತರಭೇತುದಾರರು ಕಡೆಯ ಘಳಿಗೆಯಲ್ಲಿ ಕ್ಯಾಂಪ್‌ಗೆ ಹೋಗಲಾಗುವುದಿಲ್ಲ ಎಂದು ಹೇಳಿದರು. ಆ ಕೂಡಲೇ ಕೊಂಡಜ್ಜಿ ಬಸಪ್ಪನವರು ನನ್ನನ್ನೂ ಜೊತೆಮಾಡಿಕೊಂಡು ಯಲಹಂಕದಲ್ಲಿ ಮತ್ತೊಬ್ಬ ತರಬೇತುದಾರರ ಮನೆಗೆ ಕರೆದುಕೊಂಡು ಹೋಗಿ ಅವರನ್ನು ಕ್ಯಾಂಪ್‌ಗೆ ಹೋಗಲೊಪ್ಪಿಸಿ ಅವರು ಬಸ್ಸಿನಲ್ಲಿ ಕುಳಿತುಕೊಳ್ಳುವ ತನಕ ಜೊತೆಯಲ್ಲೇ ಇದ್ದು ಬಂದೆವು. ನಾನೇ ಆಗಿದ್ದಿದ್ದರೆ ಆ ಪರಿಯ ತೊಂದರೆ ತೆಗೆದುಕೊಂಡು ಆ ಕೆಲಸ ಮಾಡುತ್ತಿರಲಿಲ್ಲ ಎಂದು ಕೊಂಡಜ್ಜಿಯವರ ಕಾಯಕ ಶ್ರದ್ಧೆಯ ಬಗ್ಗೆ ಗೌರವದ ಮಾತುಗಳನ್ನಾಡುತ್ತಾರೆ.

ಹೆಚ್.ಎ.ಎಲ್ ಶಾಲೆಯ ಪ್ರಾಂಶುಪಾಲರಾಗಿದ್ದ ಟಿ.ಎಸ್. ಲೂಕಾಸ್ ತಮ್ಮ ನಿವೃತ್ತಿಯ ನಂತರವೂ ರಾಷ್ಟ್ರ ಮಟ್ಟದ ಸ್ಕೌಟ್ಸ್ ಚಟುವಟಿಕೆಗಳಲ್ಲಿ ಸಕ್ರಿಯವಾಗಿದ್ದರು. ಇಂತಹ ಅನೇಕ ಸ್ಕೌಟ್ಸ್ ಸ್ವಯಂಸೇವಕರನ್ನು ಪ್ರೋತ್ಸಾಹಿಸಿದ್ದಾರೆ, ಅವರೊಟ್ಟಿಗೆ ಕೆಲಸ ಮಾಡಿದ್ದಾರೆ ಕೊಂಡಜ್ಜಿ ಬಸಪ್ಪನವರು, ಎಲ್ಲರ ಕೈಗೆ ಸಿಗುವ ಸ್ಕೌಟ್ಸ್‌ನ ರಾಜ್ಯ ಮುಖ್ಯ ಆಯುಕ್ತರಾಗಿದ್ದರು. ಯಾವುದೇ ಹಮ್ಮ ಬಿಮ್ಮುಗಳಿಲ್ಲದೆ ಸ್ವಯಂಸೇವಕರೊಂದಿಗೆ ಬೆರೆಯುತ್ತಿದ್ದರು. ಇಷ್ಟು ಸರಳ ವ್ಯಕ್ತಿಯನ್ನು ಸ್ಕೌಟ್ಸ್‌ನ ಅಷ್ಟು ದೊಡ್ಡ ಹುದ್ದೆಯಲ್ಲಿ ನಾನಿನ್ನಾರನ್ನೂ ನೋಡಿಲ್ಲ ಎಂದು ಲೂಕಾಸ್ ತಮ್ಮ ಮನದಾಳದ ಮಾತುಗಳನ್ನು ಬಿಚ್ಚಿಡುತ್ತಾರೆ. ಅವರು ಯಾವಾಗಲೂ ವಿದ್ಯಾರ್ಥಿಗಳ ಕ್ಷೇಮವನ್ನೇ ಬಯಸುತ್ತಿದ್ದವರು. ಜಾಂಬೂರೇಟ್‌ಗಳಲ್ಲಿ ಮಕ್ಕಳೆಲ್ಲಾ ಊಟ ಮಾಡಿದ ನಂತರವೇ ಕೊಂಡಜ್ಜಿ ಬಸಪ್ಪನವರು ಊಟಕ್ಕೆ ಕೂರುತ್ತಿದ್ದರು ಎಂದು ಲೂಕಾಸ್ ನೆನಪಿಸಿಕೊಂಡರು. 1968, ದೊಡ್ಡಬಳ್ಳಾಪುರದ ಅನಿಬೆಸೆಂಟ್ ಪಾರ್ಕ್‌ನಲ್ಲಿ ಜಾಂಬೂರೇಟ್ ನಡೆದಿತ್ತು. ಅಂದು ಬಾರೀ ಮಳೆ ಬಿದ್ದು ಇಡೀ ಕ್ಯಾಂಪ್ ಸೈಟ್ ಅಕ್ಷರಶಃ ಜಲಾವೃತಗೊಂಡಿತ್ತು, ದೂರವಾಣಿ ಸಂಪರ್ಕ ಕಡಿತವಾಗಿತ್ತು. ಅಂತಹ ಇಕ್ಕಟ್ಟಿನ ಪರಿಸ್ಥಿತಿಯಲ್ಲೂ ಬಸ್ಸುಗಳನ್ನು ತರಿಸಿ ಮಕ್ಕಳನ್ನು ಛತ್ರ, ಸಭಾಂಗಣಗಳತ್ತ ಸಾಗಿಸಿ, ಎಲ್ಲರಿಗೂ ಊಟ ನೀರು ಸೂರು ಸಿಕ್ಕಿದೆಯೇ ಎಂಬುದನ್ನು ಖುದ್ದು ತಾವೇ ಹೋಗಿ ಪರಿಶೀಲಿಸಿದ ನಂತರವೇ ಕೊಂಡಜ್ಜಿ ಬಸಪ್ಪನವರು ಊಟ ಮಾಡಿದರು ಎಂದು ಲೂಕಾಸ್ ತಮ್ಮ ನಾಯಕರ ಬಗ್ಗೆ ಬಹಳ ಹೆಮ್ಮೆಯಿಂದ ಹೇಳುತ್ತಾರೆ.

ಈ ವಿಷಯವನ್ನು ರಾಮಯ್ಯನವರೂ ನೆನಪಿಸಿಕೊಳ್ಳುತ್ತಾರೆ. ವಿದ್ಯಾರ್ಥಿಗಳನ್ನು ಬೇರೆ ಸ್ಥಳಗಳಿಗೆ ತಲುಪಿಸುವಾಗ ಸಂಪೂರ್ಣ ಮಳೆಯಲ್ಲಿ ಒದ್ದೆಯಾಗಿದ್ದ ಕೊಂಡಜ್ಜಿ ಬಸಪ್ಪನವರು ಎಲ್ಲಾ ವಿದ್ಯಾಥಿಗಳು ಊಟ ಮಾಡಿದರೇ ಎಂಬುದನ್ನು ಖಾತ್ರಿ ಮಾಡಿಕೊಂಡ ಮೇಲಷ್ಟೇ ಮಧ್ಯರಾತ್ರಿ ತಾವು ಊಟ ಮಾಡಿದ್ದು. ಅಷ್ಟಾದ ಮೇಲೆ ಬೆಳಿಗ್ಗೆ ಬೇಗನೆ ಎದ್ದು ಆ ದಿನದ ಚಟುವಟಿಕೆಗಳ ಯೋಜನೆಯಲ್ಲಿ ತೊಡಗಿದರು.



**ಕೊಂಡಜ್ಜಿ ಬಸಪ್ಪನವರು ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿದ್ದ ಮೂರು ಮುಖ್ಯ ಕೊರತೆಗಳನ್ನು ಗುರುತಿಸಿ ಅವುಗಳನ್ನು ನಿವಾರಿಸಲು ಕೆಲಸ ಮಾಡಿದ ಬಗ್ಗೆ ರಾಮಯ್ಯನವರು ವಿವರಿಸುತ್ತಾರೆ. ಮೊದಲನೆಯದು ಎಲ್ಲಾ ಜಿಲ್ಲೆಗಳಲ್ಲಿ ತರಭೇತುದಾರರ ಸಂಖ್ಯೆಯನ್ನು ಹೆಚ್ಚಿಸುವುದು, ತನ್ಮೂಲಕ ಸ್ಕೌಟ್ಸ್ ಚಟುವಟಿಕೆಗಳು ಬೆಂಗಳೂರು ಮೂಲದ ತರಬೇತುದಾರರ ಮೇಲೆ ಅವಲಂಬಿತವಾಗಬಾರದು. ಎರಡನೆಯದು ರಾಜ್ಯ ಸಹಾಯಕ ಸಂಘಟನಾ ಆಯುಕ್ತರ ಹುದ್ದೆಗಳನ್ನು ಹೆಚ್ಚಿಸುವುದು, ಇದೀಗ ಐದರಿಂದ 25 ಕ್ಕೆ ಏರಿಕೆ ಆಗಿದೆ. ಇದರೊಂದಿಗೆ ಪ್ರತಿ ಜಿಲ್ಲೆಗಳಲ್ಲಿ ವಾರ್ಷಿಕ ಸಭೆ ನಡೆಯುವಂತೆ ಮಾಡುವುದು.**




ಕೊಂಡಜ್ಜಿ ಬಸಪ್ಪನವರು ಸ್ಕೌಟ್ಸ್ ಮತ್ತು ಗೈಡ್ಸ್‌ನ ಪ್ರಧಾನ ಕಚೇರಿಗೆ ಬಂದ ಮೇಲೆ ಬದಲಾವಣೆಯ ಹೊಸ ಪರ್ವ ಆರಂಭವಾಯಿತು. ಅವರು ರಾಜ್ಯ ಮುಖ್ಯ ಆಯುಕ್ತರಾಗಿ 1982ರ ವರೆಗೆ ಸೇವೆ ಸಲ್ಲಿಸಿದರು. ಶ್ರೀಯುತರ ಅವಧಿಯಲ್ಲಿಯೇ ಸ್ಕೌಟ್ಸ್ ಮತ್ತು ಗೈಡ್ಸ್ ಕ್ರಿಯಾಶೀಲವಾಯಿತು ಎಂದು ತುಂಬು ಮನಸ್ಸಿನಿಂದ ಹೆಚ್.ವೈ ರಾಮಯ್ಯ ಹೇಳುತ್ತಾರೆ. ಈಗ ಕರ್ನಾಟಕ ರಾಜ್ಯ ಘಟಕ ಇಡೀ ದೇಶದಲ್ಲಿ ಮೂರನೆಯ ಅತಿ ಹೆಚ್ಚು ಸದಸ್ಯತ್ವ ಇರುವ ರಾಜ್ಯವಾಗಿದೆ. ಕೊಂಡಜ್ಜಿ ಬಸಪ್ಪನವರು ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿದ್ದ ಮೂರು ಮುಖ್ಯ ಕೊರತೆಗಳನ್ನು ಗುರುತಿಸಿ ಅವುಗಳನ್ನು ನಿವಾರಿಸಲು ಕೆಲಸ ಮಾಡಿದ ಬಗ್ಗೆ ರಾಮಯ್ಯನವರು ವಿವರಿಸುತ್ತಾರೆ. ಮೊದಲನೆಯದು ಎಲ್ಲಾ ಜಿಲ್ಲೆಗಳಲ್ಲಿ ತರಬೇತುದಾರರ ಸಂಖ್ಯೆಯನ್ನು ಹೆಚ್ಚಿಸುವುದು ತನ್ಮೂಲಕ ಸ್ಕೌಟ್ಸ್ ಚಟುವಟಿಕೆಗಳು ಬೆಂಗಳೂರು ಮೂಲದ ತರಬೇತುದಾರರ ಮೇಲೆ ಅವಲಂಬಿತವಾಗಬಾರದು. ಎರಡನೆಯದು ರಾಜ್ಯ ಸಹಾಯಕ ಸಂಘಟನಾ ಆಯುಕ್ತರ ಹುದ್ದೆಗಳನ್ನು ಹೆಚ್ಚಿಸುವುದು, ಇದೀಗ ಐದರಿಂದ 25 ಕ್ಕೆ ಏರಿಕೆ ಆಗಿದೆ. ಇದರೊಂದಿಗೆ ಪ್ರತಿ ಜಿಲ್ಲೆಗಳಲ್ಲಿ ವಾರ್ಷಿಕ ಸಭೆ ನಡೆಯುವಂತೆ ಮಾಡುವುದು. ಕೋಲಾರ, ಗುಲ್ಬರ್ಗ, ಚಿತ್ರದುರ್ಗ, ದಾವಣಗೆರೆ ಮತ್ತು ಕಾರವಾರ ಜಿಲ್ಲೆಗಳಲ್ಲಿ ವಾರ್ಷಿಕ ಸಭೆಗಳೇ ನಡೆಯದಂತೆ ನಿಷ್ಕ್ರಿಯವಾಗಿದ್ದವು ಎಂದು ರಾಮಯ್ಯನವರು ಹೇಳುತ್ತಾರೆ. ಇಷ್ಟರ ನಡುವೆ ಅವರಿಲ್ಲದ ಕೊರತೆಯನ್ನು ಹೇಳುವ ರಾಮಯ್ಯನವರು

1956ರಿಂದ ಈಚೆಗೆ ರಾಜ್ಯ ಮಟ್ಟದ ಜಾಂಬೂರೇಟ್ ಒಂದೂ ಆಗಿಲ್ಲ ಎಂಬುದರ ಬಗ್ಗೆ ಬೇಸರ ವ್ಯಕ್ತಪಡಿಸುತ್ತಾರೆ. ಎರಡರಿಂದ ಮೂರು ವರ್ಷಗಳಿಗೊಮ್ಮೆ ಆಗಬೇಕಾದ ಕ್ಯಾಂಪ್ ಆಗಿಯೇ ಇಲ್ಲ ಎಂಬುದು ಅವರ ಅಸಮಾದಾನ. 1960ರಲ್ಲಿ ಬೆಂಗಳೂರಿನಲ್ಲಿ ರಾಷ್ಟ್ರಮಟ್ಟದ ಜಾಂಬೂರಿ ಸಂಘಟಿಸಿದ್ದಾಗ ಗೈಡ್ಸ್ ಚಳವಳಿಯನ್ನು ಹುಟ್ಟುಹಾಕಿದ ಶ್ರೀಮತಿ ಬಾಡೆನ್ ಪೋವೆಲ್ ಅವರನ್ನು ಗೌರವ ಅತಿಥಿಯಾಗಿ ಬಂದದ್ದನ್ನು ಸ್ಮರಿಸಿಕೊಂಡರು. ಅಂತಹ ಕ್ಯಾಂಪ್‌ಗಳಿಗೆ ತಮ್ಮದೇ ಹಣ ವ್ಯಯ ಮಾಡಿ ಅದನ್ನು ಮತ್ತೆ ಸ್ಕೌಟ್ಸ್‌ನಿಂದ ಪಡೆಯದೇ ಹಾಗೆಯೇ ಬಿಡುತ್ತಿದ್ದರು ಎಂಬ ಅಂಶ ಮುದೇನೂರು ಸಂಗಣ್ಣನವರು ರಚಿಸಿದ ಕೊಂಡಜ್ಜಿ ಬಸಪ್ಪನವರ ಆತ್ಮಚರಿತ್ರೆಯಲ್ಲಿ ದಾಖಲಾಗಿದೆ.

ತರಬೇತುದಾರರ ತರಭೇತಿ ಶಿಬಿರಗಳು ಮಧ್ಯಪ್ರದೇಶದ ಪಚಮರಿಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರೀಯ ತರಭೇತಿ ಕೇಂದ್ರದಲ್ಲಿ ಸ್ಕೌಟ್ಸ್ ಮುಖ್ಯಸ್ಥರ ಸಮ್ಮುಖದಲ್ಲೇ ನಡೆಯುತ್ತಿತ್ತು. ಅದಾಗ ಕೊಂಡಜ್ಜಿ ಬಸಪ್ಪನವರು ಕರ್ನಾಟಕದ ಮಟ್ಟಿಗೆ ಸ್ಕೌಟ್ಸ್ ತರಬೇತಿ ಶಿಬಿರವನ್ನು ನಿವೃತ್ತ ಸ್ಕೌಟ್ಸ್ ಮುಖ್ಯಸ್ಥ ಎಸ್. ನೀಲಕಂಠನ್ ಅವರ ಕಣ್ಗಾವಲಿನಲ್ಲಿ ನಡೆಸಲು ಅನುಮತಿ ಕೋರಿದರು. ಅವರ ಇಚ್ಚೆಯಂತೆ 1966 ರಲ್ಲಿ ದೊಡ್ಡಬಳ್ಳಾಪುರ ಬಳಿ ಇರುವ ಬೆಸೆಂಟ್ ಪಾರ್ಕ್‌ನಲ್ಲಿ 24 ಮಂದಿಗೆ ತರಬೇತಿ ನೀಡಿದೆವು ಎಂದು ರಾಮಯ್ಯ ನೆನಪಿಸಿಕೊಳ್ಳುತ್ತಾರೆ. ಅದಾದ ಕೂಡಲೇ ನೀಲಕಂಠನ್ ಅವರ ನಾಯಕತ್ವದಲ್ಲಿ ಜಿಲ್ಲೆಗಳನ್ನು ಪುನರುಜ್ಜೀವನಗೊಳಿಸಲು ಆಯುಕ್ತರ ತರಬೇತಿ ನೀಡಲಾಯಿತು. ಪ್ರತಿ ಜಿಲ್ಲೆಯಿಂದ ಆರ್ಥಿಕ ಹಾಗೂ ಸಾಮಾಜಿಕವಾಗಿ ಪ್ರಬಲರನ್ನೇ ಆಯ್ಕೆ ಮಾಡಿಕೊಂಡು ತರಬೇತಿ ನೀಡಲಾಯಿತು. ಇದರಿಂದ ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಬೆಂಬಲ ದೊರೆತಂತಾಯಿತು. ಮಲ್ಲಿಕಾರ್ಜುನ ಸ್ವಾಮಿ ಮತ್ತು ಮಕ್ಸೂದ್ ಅಲಿ ಖಾನ್ ಮಂತ್ರಿಗಳು ಸೇರಿದಂತೆ ವೈದ್ಯರು, ವಕೀಲರು, ಸಮಾಜ ಸೇವಕರು, ಹೋರಾಟಗಾರರು ಅದರಲ್ಲಿ ಪಾಲ್ಗೊಂಡಿದ್ದರು. ಒಟ್ಟಾರೆ ಐಷಾರಾಮಿ ಜೀವನ ನಡೆಸುತ್ತಿದ್ದ 35 ಮಂದಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ತರಬೇತಿಯಲ್ಲಿ ಸಾರ್ಥಕತೆ ಕಂಡರು. ಐದು ದಿನಗಳಲ್ಲಿ ಅವರು ತಮ್ಮ ಲಗೇಜುಗಳನ್ನು ತಾವೇ ಹೊತ್ತರು, ಟೆಂಟ್‌ಗಳನ್ನು ತಾವೇ ಹಾಕಿಕೊಂಡರು, ಗುಂಡಿಗಳನ್ನು ಅಗೆದರು, ಸುತ್ತಮುತ್ತಲಿನ ಪರಿಸರವನ್ನು ಅರ್ಥಮಾಡಿಕೊಂಡರು. ಆ ಐದು ದಿವಸಗಳ ತರಬೇತಿ ಅವರ ಬದುಕಿನಲ್ಲಿ ಬಹಳ ದೊಡ್ಡ ಪಾಠ ಕಲಿಸಿತ್ತು.

ಅವರೆಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ವಾರ್ಷಿಕ ಸಭೆಗಳನ್ನು ಮಾಡುವ ಮುನ್ನ ರಾಜ್ಯ ಮುಖ್ಯ ಆಯುಕ್ತರಾದ ಕೊಂಡಜ್ಜಿ ಬಸಪ್ಪ, ರಾಜ್ಯ ಗೈಡ್ಸ್ ಆಯುಕ್ತರು, ಮಾಜಿ ಉಪಸಭಾಪತಿ ಎಂ.ಆರ್.ಲಕ್ಷ್ಮಮ್ಮ, ರಾಜ್ಯ ಆಯುಕ್ತರಾದ ದೀನದಯಾಳ್ ನಾಯ್ಡು, ಎಸ್‌ಒಸಿ ಶ್ರೀಮತಿ ಹಮೀದ್ ರೆಹಮಾನ್, ರಾಜ್ಯ ಸ್ಕೌಟ್ಸ್ ಸಂಘಟನಾ ಆಯುಕ್ತ ರಾಮಯ್ಯನವರು ಸೇರಿದಂತೆ ಎಲ್ಲಾ ಜಿಲ್ಲೆಗಳಲ್ಲಿ ಪ್ರವಾಸ ಕೈಗೊಂಡರು. ಮೊದಲಿಗೆ ಸ್ಥಳೀಯ ಜಿಲ್ಲಾಧಿಕಾರಿ ಕಚೇರಿಯಲ್ಲಿ ಸ್ಥಳೀಯ ಮುಖಂಡರು ಹಾಗೂ ಸ್ಕೌಟ್ಸ್ ಸಿಬ್ಬಂದಿಯ ಜೊತೆ ಬೆಳಿಗ್ಗೆ ಸಭೆ ನಡೆಸುತ್ತಿದ್ದೆವು. ಮಧ್ಯಾಹ್ನ ಸ್ಕೌಟ್ಸ್ ಮಾಸ್ಟರ್‌ಗಳು ಹಾಗೂ ಗೈಡ್ಸ್ ಕ್ಯಾಪ್ಟನ್‌ಗಳ ಸಭೆ ನಡೆಸುತ್ತಿದ್ದೆವು. ಸಂಜೆ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿನಿಯರಿಂದ ಸ್ಕೌಟ್ಸ್ ಗೈಡ್ಸ್ ಚಟುವಟಿಕೆಗಳ ಪ್ರಾತ್ಯಕ್ಷಿಕೆ ಮಾಡಿಸುತ್ತಿದ್ದೆವು. ಆ ವರ್ಷ ನಾನು ಮತ್ತು ಕೊಂಡಜ್ಜಿಯವರು ಜಿಲ್ಲಾ ಕೇಂದ್ರಗಳಲ್ಲಿ ಏನೆಲ್ಲಾ ಸಮಸ್ಯೆಗಳಿವೆ ಎಂಬುದನ್ನು ಅರಿಯಲು ಎರಡು ಬಾರಿ ಭೇಟಿ ನೀಡಿದ್ದೆವು. ಉದಾಹರಣೆಗೆ ಕೆ.ಜಿ.ಎಫ್‌ಗೆ ನಾವು ಭೇಟಿ ನೀಡಿದಾಗ ಕಾರ್ಯದರ್ಶಿ ತಪ್ಪಿಸಿಕೊಂಡು ಹೋಗಿದ್ದರು. ಮೂರು ಬಾರಿ ಅವರ ಮನೆಗೆ ಹೋದೆವು, ಅವರು ಸಿಗದೇ ಹೋದ ಹಿನ್ನೆಲೆಯಲ್ಲಿ ಅಲ್ಲಿಯೇ ಉಳಿಯುವ ತೀರ್ಮಾನ ಕೈಗೊಂಡು ರಾತ್ರಿ 9 ಗಂಟೆಗೆ ಪೊಲೀಸ್ ಕರೆಸಿ ಕಚೇರಿಯ ಬೀಗ ಮುರಿಸಿ ಮಾರನೆಯ ದಿನ ಜಿಲ್ಲಾಧಿಕಾರಿಗಳಿಗೆ ಕಚೇರಿಯ ಜವಾಬ್ದಾರಿ ವಹಿಸಿ ಹಿಂದಿರುಗಿದೆವು. ಎಷ್ಟೋ ಬಾರಿ ಪ್ರವಾಸದಲ್ಲಿರುವಾಗ ವರಾಂಡಗಳಲ್ಲಿ ಮಲಗಿದ ಸಂದರ್ಭಗಳೂ ಇವೆ, ಬಸಪ್ಪನವರು ಬೆಳಿಗ್ಗೆ



ಬೇಗ ಎದ್ದು ಒಂದು ವಾಕ್ ಮುಗಿಸಿ ಬರುತ್ತಿದ್ದರು ನಾನಿನ್ನೂ ಮಲಗಿರುತ್ತಿದ್ದೆ ಎಂದು ಜ್ಞಾಪಿಸಿಕೊಳ್ಳುತ್ತಾರೆ. ರಾಮಯ್ಯನವರ ಪ್ರಕಾರ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಮುಖ್ಯೋಪಾಧ್ಯಾಯರ ಪ್ರಾಮುಖ್ಯತೆ ಹಾಗೂ ಸ್ಕೌಟ್ಸ್ ಅನ್ನು ಟ್ರಸ್ಟ್‌ಗಳಾಗಿ ಮಾಡಿದ್ದು ಬಹಳ ದೊಡ್ಡ ಕೆಲಸ. ಜಿಲ್ಲಾ ಮಟ್ಟದ ಸಭೆಗಳು ನಡೆಯುವಾಗ ಶಾಲಾ ಮುಖ್ಯೋಪಾಧ್ಯಾಯರಿಗಾಗಿ ಸಭೆ ನಡೆಸಲಾಗುತ್ತಿತ್ತು. ಸ್ಕೌಟ್ಸ್‌ನ ಪ್ರಾಮುಖ್ಯತೆ, ಶಿಕ್ಷಣದಲ್ಲಿ ಸ್ಕೌಟ್ಸ್ ಮಹತ್ವ ಹಾಗೂ ಮುಖ್ಯೋಪಾದ್ಯಾಯರ ಪಾತ್ರ ಮುಂತಾಗಿ ಅವರಿಗೆ ಮನವರಿಕೆ ಮಾಡಿಕೊಡಲು ಅಂತದೊಂದು ವೇದಿಕೆ ಕೊಂಡಜ್ಜಿ ಬಸಪ್ಪನವರು ಸೃಷ್ಟಿ ಮಾಡಿದ್ದರು. ಪ್ರಶ್ನೋತ್ತರ ಕಾರ್ಯಕ್ರಮಗಳೂ ನಡೆಸಲಾಗುತ್ತಿತ್ತು. ಆಯಾ ಶಾಲೆಗಳಲ್ಲಿ ತರಬೇತಿ ಪಡೆದ ಶಿಕ್ಷಕರಿದ್ದಾರೆಯೇ ಇಲ್ಲವೇ ಎಂಬ ವಿವರ ಹಾಗೂ ಇಲ್ಲವಾದಲ್ಲಿ ತರಭೇತಿಗೆ ಕಳುಹಿಸಿಕೊಡುವ ಅವರ ಇಷ್ಟ ಕಷ್ಟಗಳ ಬಗೆಗಿನ ಮಾಹಿತಿ ಅಲ್ಲಿಯೇ ಲಭ್ಯವಾಗುತ್ತಿತ್ತು. ಅದರಿಂದ ಹೊಸ ಘಟಕಗಳನ್ನು ಸ್ಥಾಪಿಸಲು ಸಾಧ್ಯವಾಗುತ್ತಿತ್ತು. ಮಧ್ಯಾಹ್ನದ ವೇಳೆ ಒಂದು ಟ್ರೂಪ್ ಮಾಡೆಲ್ ಮಾಡಲಾಗುತ್ತಿತ್ತು. ಕ್ಯಾಂಪ್ ಸಂಬಂದಿ ಚಟುವಟಿಕೆಗಳ ಪ್ರದರ್ಶನವೂ ನಡೆಯುತ್ತಿತ್ತು. ರಾತ್ರಿ ವೇಳೆಗೆ ಕ್ಯಾಂಪ್ ಫೈರ್‌ನೊಂದಿಗೆ ದಿನದ ಚಟುವಟಿಕೆ ಮುಕ್ತಾಯವಾಗುತ್ತಿತ್ತು. ಇಷ್ಟೆಲ್ಲಾ ಚಟುವಟಿಕೆಗಳಿಂದ ಸ್ಕೌಟ್ಸ್ ಚಳವಳಿ ಪ್ರಸಿದ್ಧಿ ಪಡೆಯಲು ಸಹಕಾರಿಯಾಯಿತು.

ಎರಡನೆಯದು ಸ್ಕೌಟ್ಸ್ ಮತ್ತು ಗೈಡ್ಸ್ ಆಸ್ತಿಪಾಸ್ತಿ ಪರಭಾರೆ ಆಗದಂತೆ ಪ್ರತಿ ಸ್ಕೌಟ್ಸ್ ಮತ್ತು ಗೈಡ್ಸ್ ಘಟಕವನ್ನು ಟ್ರಸ್ಟ್ ಆಗಿ ಮಾರ್ಪಡಿಸಲು ಬೇಕಾದ ಟ್ರಸ್ಟ್ ಡೀಡ್ ಎಲ್ಲರಿಗೂ ತಲುಪಿಸಿ ಟ್ರಸ್ಟ್‌ಗಳನ್ನಾಗಿ ಮಾರ್ಪಡಿಸಲಾಯಿತು. ಆ ಸಂದರ್ಭದಲ್ಲಿ ಕೊಂಡಜ್ಜಿ ಬಸಪ್ಪನವರು ಶಾಸಕರೂ ಅಲ್ಲ ಸಂಸದರೂ ಆಗಿರಲಿಲ್ಲ. 1980ರಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಕಚೇರಿ ಸಿಬ್ಬಂದಿಯಾಗಿ ಸೇರ್ಪಡೆಯಾದ ಜಯರಾಮ್ ಹೇಳುವಂತೆ ಸ್ಕೌಟ್ಸ್ ಮತ್ತು ಗೈಡ್ಸ್‌ನ ಯಾವುದೇ ಕೆಲಸಗಳ ಹಿಂದೆ ಫೈಲ್‌ನ ಬೆನ್ನುಬಿದ್ದು ಟೇಬಲ್‌ನಿಂದ ಟೇಬಲ್‌ಗೆ ಪ್ರತಿ ಹಂತದಲ್ಲೂ ತಾವೇ ಖುದ್ದು ಅಲೆದು ಕೆಲಸ ಮಾಡಿಸಿಕೊಂಡು ಬರುತ್ತಿದ್ದರು. ಅವರು ನಮಗೆ ವಹಿಸಿದ ಕೆಲಸ ಸಕಾಲದಲ್ಲಿ ಮಾಡದಿದ್ದರೆ ತಾವೇ ಆ ಕೆಲಸ ಮಾಡಿ ಮುಗಿಸುತ್ತಿದ್ದರು. ಲೂಕಾಸ್ ಹೇಳುವಂತೆ ರಾಜ್ಯ ಸಂಘಟನಾ ಆಯುಕ್ತರು ಬೆಂಗಳೂರಿನಲ್ಲಿಯೇ ತಂಗಲು ಬೇಕಾದ ವ್ಯವಸ್ಥೆ ಮಾಡಲಾಗಿತ್ತು. ಅಗತ್ಯ ಬಿದ್ದಾಗ ಅಲ್ಲಿಯೇ ಇದ್ದು ಕೆಲಸ ಸುಲಭ ಮಾಡಿಕೊಳ್ಳಲು ಕೊಂಡಜ್ಜಿ ಅವರು ಈ ಏರ್ಪಾಟು ಮಾಡಿದ್ದರು.

ಧಾರವಾಡದ ಜಿಲ್ಲಾ ಮುಖ್ಯ ಆಯುಕ್ತರಾದ ಎಂ.ಎಂ. ಲೊಂಡೆ ಅವರು ಬಸಪ್ಪನವರ ಬಗೆಗೆ ಅಪಾರ ಗೌರವದಿಂದ ಮಾತನಾಡುತ್ತಾರೆ. ಕೊಂಡಜ್ಜಿ ಬಸಪ್ಪನವರು ಕೇಂದ್ರ ಕಚೇರಿಯಲ್ಲಷ್ಟೇ ಕೆಲಸ ಮಾಡುತ್ತಿರಲಿಲ್ಲ. ಒಮ್ಮೆ ಧಾರವಾಡಕ್ಕೆ ಬಂದಾಗ ನನ್ನನ್ನು ಖುದ್ದು ಡಿ.ಡಿ.ಪಿ.ಐ ಕಚೇರಿಗೆ ಕರೆದುಕೊಂಡು ಹೋಗಿ ಪರಿಚಯಿಸಿದ್ದರು. ಆಗ ಏರ್ಪಾಡಾದ ಸಂಪರ್ಕ ಇಂದಿಗೂ ಹಾಗೆಯೇ ಉಳಿದಿದೆ. ಸ್ಕೌಟ್ಸ್ ಮತ್ತು ಗೈಡ್ಸ್‌ನ ಯಾವುದೇ ಕೆಲಸಗಳು ಯಾವುದೇ ಅಡಚಣೆ ಇಲ್ಲದೆ ನಡೆದುಕೊಂಡು ಹೋಗುತ್ತವೆ. ಲೊಂಡೆ ಬಸಪ್ಪನವರನ್ನು ಭೇಟಿಯಾದಾಗ ಕೇವಲ ಸ್ಕೌಟ್ಸ್ ಮಾಸ್ಟರ್ ಆಗಿದ್ದರು. ರಾಮಯ್ಯ ಹಾಗೂ ಲೂಕಾಸ್ ಅವರನ್ನು ಆಯ್ಕೆ ಮಾಡಿದಂತೆ ಇವರನ್ನೂ ಸಹ ಬಸಪ್ಪನವರು ಆಯ್ಕೆ ಮಾಡಿ ಜಿಲ್ಲಾ ಕೇಂದ್ರದ ಜವಾಬ್ದಾರಿ ನಿರ್ವಹಿಸುವತನಕ ಕರೆತಂದರು. ಜಿಲ್ಲಾ ಕೇಂದ್ರಗಳಿಗೆ ಬೇಕಾದ ಸರಕು ಸರಂಜಾಮುಗಳನ್ನು ಕಳುಹಿಸಿ ಎಲ್ಲಾ ಕೆಲಸಗಳು ಸುಸೂತ್ರವಾಗಿ ನಡೆಯುವಂತೆ ಮಾಡುತ್ತಿದ್ದರು ಎಂದು ಲೊಂಡೆ ಜ್ಞಾಪಿಸಿಕೊಳ್ಳುತ್ತಾರೆ. ವಿಶೇಷವಾಗಿ ಅಡಿಗೆ ಪಾತ್ರೆಗಳು ಹಾಗೂ ಅಲ್ಮೆರಾ ಎಲ್ಲಾ ಜಿಲ್ಲೆಗಳಿಗೆ ಕೊಡಿಸಿದ್ದು ನೆನಪಿಸಿಕೊಳ್ಳುತ್ತಾರೆ. ಅದರಲ್ಲೂ 100 ಮಂದಿಗೂ ಹೆಚ್ಚಿನ ಜನರಿಗೆ ಅಡಿಗೆ ಮಾಡಲು ಬೇಕಾದ ಪಾತ್ರೆಗಳದ್ದು ಒಂದು ಸೆಟ್, 8 ಮಂದಿಗೆ ಅಡಿಗೆ ಮಾಡಲು ಬೇಕಾದ ಒಂದು ಸೆಟ್ ಕಳುಹಿಸಿದ್ದರು. ನಮಗೇನೂ ಬೇಕು, ನಮ್ಮ ಅಗತ್ಯಗಳೇನು ಎಂಬುದರ ಬಗ್ಗೆ ಅವರಿಗೆ ಸ್ಪಷ್ಟತೆ ಇತ್ತು. ಅತ್ಯುತ್ತಮ ಗುಣಮಟ್ಟದ ವಸ್ತುಗಳನ್ನೇ ಕಳುಹಿಸುತ್ತಿದ್ದರು. ಅವರು ಕಳುಹಿಸಿದ ಅಲ್ಮೆರಾ ಹಾಗೂ



ಪಾತ್ರೆಗಳನ್ನು ಈಗಲೂ ಬಳಸಲಾಗುತ್ತಿದೆ. ಕೊಂಡಜ್ಜಿ ಬಸಪ್ಪನವರಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಬಗೆಗಿದ್ದ ವಿಶ್ವಾಸದ ಬಗ್ಗೆ ಹೇಳಲು ಅಸಾಧ್ಯ, 1962 ರಿಂದ 1982 ರವರೆಗೆ ಅವರು ಸಲ್ಲಿಸಿದ ನಿಸ್ವಾರ್ಥ ಸೇವೆಯಿಂದಲೇ ಕರ್ನಾಟಕದ ಸ್ಕೌಟ್ಸ್ ಅಂಡ್ ಗೈಡ್ಸ್ ಘಟಕ ದೇಶದಲ್ಲೇ ಬಹಳ ಸದೃಡವಾಗಿ ಬೆಳೆದು ನಿಂತಿದೆ.



ಅವರ 60 ನೆಯ ಹುಟ್ಟು ಹಬ್ಬದಂದು ತಮ್ಮ ಸ್ನೇಹಿತರು ಹಿತೈಷಿಗಳು ಒಂದು ಲಕ್ಷ ರೂಪಾಯಿಯ ಚೆಕ್ ಉಡುಗೊರೆಯಾಗಿ ಕೊಟ್ಟರು. ಕೊಂಡಜ್ಜಿ ಬಸಪ್ಪನವರು ಎಂದಿನಂತೆ ಅದನ್ನು ಕೂಡಲೇ ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ದೇಣಿಗೆಯಾಗಿ ಕೊಟ್ಟರು. ಎಲ್ಲಾ ಕ್ಯಾಂಪ್‌ಗಳು ಹಾಗೂ ಜಾಂಬೂರೇಟ್‌ಗಳಲ್ಲಿ ಕೊಂಡಜ್ಜಿ ಬಸಪ್ಪನವರು ಪುಟ್ಟ ಹುಡುಗರಂತೆ ಖುಷಿಯಾಗಿ ಪಾಲ್ಗೊಳ್ಳುತ್ತಿದ್ದರು. ಅವರ ಸಾಧನೆಗೆ ಅನ್ವರ್ಥವೆಂಬಂತೆ ಕರ್ನಾಟಕದ, ಕೊಂಡಜ್ಜಿ ಗ್ರಾಮದಲ್ಲಿ ಕೊಂಡಜ್ಜಿ ಬಸಪ್ಪ ಟ್ರೈನಿಂಗ್ ಅಂಡ ಕ್ಯಾಂಪಿಗ್ ಸೆಂಟರ್ ತಲೆ ಎತ್ತಿದೆ. ಇದು ಅವರಿಗೆ ಸಂದ ಗೌರವ.



# ಕೊಂಡಜ್ಜಿ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರ



ಕೊಂಡಜ್ಜಿ ಗ್ರಾಮಕ್ಕೆ ಒಂದು ಕಿಲೋಮೀಟರ್ ದೂರದಲ್ಲಿರುವ ಸ್ಕೌಟ್ಸ್ ತರಬೇತಿ ಕೇಂದ್ರ ಹರಿಹರ ಹಾಗೂ ದಾವಣಗೆರೆ ನಗರಗಳಿಗೆ ಸಮಾನವಾಗಿ 13 ಕಿಲೋಮೀಟರ್ ಅಂತರದಲ್ಲಿದೆ. 1974 ರಲ್ಲಿ ಅಂದಿನ ಕರ್ನಾಟಕ ರಾಜ್ಯದ ರಾಜ್ಯಪಾಲರಾದ ಶ್ರೀ ಮೋಹನ್‌ಲಾಲ್ ಸುಖಾಡಿಯಾ ಅವರು ಸೆಪ್ಟೆಂಬರ್ 8,1974 ರಂದು ಸ್ಕೌಟ್ಸ್ ತರಬೇತಿ ಕೇಂದ್ರವನ್ನು ಉದ್ಘಾಟಿಸಿದರು.

ಈ ಕೇಂದ್ರವು ಕೊಂಡಜ್ಜಿ ಬಸಪ್ಪನವರಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಬಗೆಗೆ ಇದ್ದ ಅಪಾರ ಕಾಳಜಿಯ ದ್ಯೋತಕವಾಗಿ ಆರಂಭಗೊಂಡಿತು. ಇದು ಅವರ ದೊಡ್ಡ ಧ್ಯೇಯವಾಗಿತ್ತು. ಈ ಯೋಜನೆಯ ಆರಂಭಿಕ ಹಂತದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯಲ್ಲಿಯೇ ವಿರೋಧಗಳು ವ್ಯಕ್ತವಾಗಿದ್ದವು. ಚಳವಳಿಯ ಹಲವು ಹಿರಿಯ ನಾಯಕರು ಈ ಬೋಳು ಬೆಟ್ಟ ಗುಡ್ಡಗಳಲ್ಲಿ ಅದಿನ್ನೇನು ಮಾಡಲು ಸಾಧ್ಯ ಎಂದು ಹೇಳಿದ್ದೂ ಉಂಟು.

**ಕೊಂಡಜ್ಜಿ ಸ್ಕೌಟ್ಸ್ ಗೈಡ್ಸ್ ತರಬೇತಿ ಕೇಂದ್ರವು ಕೊಂಡಜ್ಜಿ ಬಸಪ್ಪನವರಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಬಗೆಗೆ ಇದ್ದ ಅಪಾರ ಕಾಳಜಿಯ ದ್ಯೋತಕವಾಗಿ ಆರಂಭಗೊಂಡಿತು. ಇದು ಅವರ ಬಹಳ ದೊಡ್ಡ ಧ್ಯೇಯವಾಗಿತ್ತು. ಯೋಜನೆಯ ಆರಂಭಿಕ ಹಂತದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯಲ್ಲಿಯೇ ವಿರೋಧಗಳು ವ್ಯಕ್ತವಾಗಿದ್ದವು. ಚಳವಳಿಯ ಹಲವು ಹಿರಿಯ ನಾಯಕರು ಹಾಗೂ ಶ್ರೀಯುತರ ಮಕ್ಕಳೂ ಕೂಡಾ ಈ ಬೆಟ್ಟ ಗುಡ್ಡಗಳಲ್ಲಿ ಅದಿನ್ನೇನು ಮಾಡಲು ಸಾಧ್ಯ ಎಂದು ಹೇಳಿದ್ದೂ ಉಂಟು.**

ಕೊಂಡಜ್ಜಿ ಗ್ರಾಮದ ಮಗ್ಗುಲಿನ ಈ ಕ್ಯಾಂಪ್ ಸೈಟ್, ತರಬೇತಿ ಕೇಂದ್ರಕ್ಕೆ ಉತ್ತಮವಾಗಿದೆ ಎಂದು ಆಗಿನ ಸ್ಕೌಟ್ಸ್‌ನ ಜಿಲ್ಲಾ ಸಹಾಯಕ ಆಯುಕ್ತರು ಹಾಗೂ ವೃತ್ತಿಯಲ್ಲಿ ತೋಟಗಾರಿಕಾ ಅಧಿಕಾರಿಯಾಗಿದ್ದ ಆರ್. ಚಂದ್ರಶೇಖರನ್ ಅವರು ಸೂಚಿಸಿದ್ದು. ಆ ಶ್ರೇಯ ಶ್ರೀಯುತರಿಗೆ ಸಲ್ಲಬೇಕು.

ಚಂದ್ರಶೇಖರನ್, ರಾಮಯ್ಯ, ಆದಿಕೇಶವಲು, ಗುರುಸ್ವಾಮಿ, ಲೊಂಡೆ ಅವರುಗಳನ್ನು ಕೊಂಡಜ್ಜಿ ಅವರು ಗುರುತಿಸಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಕೆಲಸ ಮಾಡಲು ನಿಯೋಜಿಸಿದ್ದರು. ಇವರೆಲ್ಲರೂ ಅತ್ಯಂತ ಕಾಳಜಿಯಿಂದ ಕೆಲಸ ಮಾಡಿದವರು.



ಕೊಂಡಜ್ಜಿ ಬಸಪ್ಪ

ಬೆಂಗಳೂರಿನ ಚಾಮುಂಡಿ ಸ್ಕೌಟ್ಸ್ ತಂಡದ ಸಂಸ್ಥಾಪಕರಾದ ಶ್ರೀ ಎಂ.ಎಚ್. ರಾಮಚಂದ್ರರಾವ್ ಅವರ ಮಗ ಚಂದ್ರಶೇಖರನ್ ಅವರನ್ನು ಯಾವುದೇ ಕೇಂದ್ರಕ್ಕೆ ನಿಯೋಜಿಸಿದರೂ ತೋಟಗಾರಿಕೆ ಹಾಗೂ ಸ್ಕೌಟ್ಸ್ ಅನ್ನು ಜೊತೆಯಾಗಿ ತೆಗೆದುಕೊಂಡು ಹೋಗುತ್ತಿದ್ದರು. ಕೆಲವೊಮ್ಮೆ ಚಿತ್ರದುರ್ಗ ಹಾಗೂ ದಾವಣಗೆರೆಯ ಸುತ್ತಮುತ್ತಲಿನ ಬಯಲು ಕಾಡು ಪ್ರದೇಶಗಳಲ್ಲಿ ಸುಮಾರು 40 ಕಿಲೋಮೀಟರ್‌ಗೂ ಹೆಚ್ಚು ಬೈಸಿಕಲ್‌ನಲ್ಲಿ ಸುತ್ತಾಡಿ ಪರಿಸರದ ಕುರಿತು ಅಧ್ಯಯನ ಮಾಡುತ್ತಿದ್ದರು. ಬಹುತೇಕ ತಮ್ಮ ಖರ್ಚಿನಲ್ಲಿಯೇ ಈ ಕೆಲಸಗಳನ್ನೆಲ್ಲಾ ಮಾಡುತ್ತಿದ್ದರು.

ಕ್ಯಾಂಪ್ ಸೈಟ್‌ನ ಸುತ್ತಮುತ್ತಲಿನ ಪೂರ್ವಾಪರಗಳನ್ನು ಅರಿತು ಮನದಟ್ಟು ಮಾಡಿಕೊಂಡು ವಿವರಿಸಿದ ನಂತರ ಕೊಂಡಜ್ಜಿ ಕ್ಯಾಂಪ್ ಸೈಟ್‌ನ ಬಗ್ಗೆ ಅಪಾರವಾದ ನಂಬಿಕೆ ಉಂಟಾಯಿತು. ಸ್ಕೌಟ್ಸ್ ಮತು ಗೈಡ್ಸ್ ಚಳವಳಿಯಲ್ಲಿಯೇ ವಿರೋಧವಿದ್ದರೂ ಬಸಪ್ಪ ಅವರಿಗೆ ಆ ನಂಬಿಕೆಯೇ ಅವರನ್ನು ಮುಂದುವರಿಯಲು ಪ್ರೇರೇಪಿಸಿತು.

ಸರ್ಕಾರ ಸಂಸ್ಥೆಗೆ ಬೇಕಾದ 80 ಎಕರೆ ಕೊಟ್ಟ ಕೂಡಲೇ ಕೊಂಡಜ್ಜಿ ಬಸಪ್ಪನವರು ಕಾರ್ಯೋನ್ಮುಖರಾದರು. ದಾವಣಗೆರೆಯ ವಾಣಿಜ್ಯೋದ್ಯಮಿಯೊಬ್ಬರ ಸಹಕಾರದಿಂದ ಕ್ಯಾಂಪ್ ಸೈಟ್‌ನ ಕೆಲಸ ಆರಂಭಿಸಿದರು. ಚಿಗಟೇರಿ ಕುಟುಂಬದವರು ಅಷ್ಟ ದಿಕ್ಕುಗಳ ಗೋಪುರವನ್ನು ಕಟ್ಟಿಸಿಕೊಟ್ಟರು. ಮೊದಲನೆಯ ಅತಿಥಿಗೃಹ ರಾಜನಹಳ್ಳಿ ಮುದ್ದುರಾಯಪ್ಪನವರ ಸಹಕಾರದಿಂದ ಕಟ್ಟಲಾಯಿತು. ಎಂ.ಕೆ.ಸ್ವಾಮಿ ಅವರು ನೀರಿನ ಟ್ಯಾಂಕ್ ಕಟ್ಟಿಸಿಕೊಟ್ಟರು. ಹರಿಹರ ಪಾಲಿಫೈಬರ್ಸ್ ಈಜು ಕೊಳ ಕಟ್ಟಿಸಿತು. ಇವುಗಳ ಜೊತೆಗೆ ಆಟದ ಮೈದಾನ, ಪೆರೇಡ್ ಮೈದಾನ, ಕ್ಯಾಂಪ್ ಫೈರ್ ವೃತ್ತ, ಬೋಜನಾಲಯ, ಅಡಿಗೆ ಮನೆ ಇತ್ಯಾದಿ ಕಾಮಗಾರಿಗಳು ಕೊಂಡಜ್ಜಿ ಬಸಪ್ಪನವರು ತಂದ ದೇಣಿಗೆಯಲ್ಲಿಯೇ ನಿರ್ಮಾಣಗೊಂಡವು.

ಈ ಎಲ್ಲಾ ಕಾಮಗಾರಿಗಳಲ್ಲಿ ಪ್ರತಿ ಜಿಲ್ಲಾ ಕೇಂದ್ರಗಳಿಂದ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳು ಭಾಗಿಯಾಗಲು ಅನುವು ಮಾಡಿಕೊಡುವುದರ ಮೂಲಕ ಎಲ್ಲರೂ ಇದರ ಒಡೆತನವನ್ನು ತಮ್ಮದಾಗಿಸಿಕೊಳ್ಳುವಂತಾಗಲಿ ಎಂದು ಕೆಲಸ ಮಾಡಿಸಿದರು.

1974 ರಲ್ಲಿ ತರಭೇತಿ ಕೇಂದ್ರ ಉದ್ಘಾಟನಾ ಸಂದರ್ಭದಲ್ಲಿ ಮಾತನಾಡಿದ ಅಂದಿನ ಕರ್ನಾಟಕ ರಾಜ್ಯದ ರಾಜ್ಯಪಾಲರು ಕೊಂಡಜ್ಜಿ ಬಸಪ್ಪನವರ ಸೇವೆ ಹಾಗೂ ಅವರ ಪರಿಶ್ರಮದ ಕುರಿತು ಮಾತನಾಡಿದರು. ಅವರ ಭಾಷಣದ ಕನ್ನಡ ಅನುವಾದ ಮಾಡುತ್ತಿದ್ದ ಕೊಂಡಜ್ಜಿ ಅವರು ತಮ್ಮ ಹೆಸರನ್ನು ಪ್ರಸ್ತಾಪಿಸದೇ ಕೊಂಡಜ್ಜಿ ಕೇವಲ ನೆಪ ಅಷ್ಟೇ ಎಂಬಂತೆ ಹೇಳಿ ಭಾಷಣದ ಸಾರಾಂಶವನ್ನು ಮಕ್ಕಳಿಗೆ ಹೇಳಿದ್ದಲ್ಲದೆ ಸ್ವಯಂಸೇವಕರು ಹಾಗೂ ವಿದ್ಯಾರ್ಥಿಗಳಿಗೆ ಆ ಪ್ರಶಂಸೆಯನ್ನು ಕೊಟ್ಟರು. ಅಲ್ಲೇನೋ ತಪ್ಪಾಗಿದೆ ಎಂದು ಗಮನಿಸಿದ ರಾಜ್ಯಪಾಲರು ಸರಿಯಾಗಿ ಅನುವಾದ ಮಾಡಿ ಎಂದು ತಾಕೀತು ಮಾಡಿದರು. ಅದಾಗ ಕೊಂಡಜ್ಜಿ ಅವರು ಮತ್ತೆ ಯಥಾವತ್ ಸ್ವಯಂಸೇವಕರಿಗೇ ಪ್ರಶಂಸೆಯ ಮಹಾಪೂರವನ್ನು ಕೊಟ್ಟರು. ಆಗ ಸಭೆಯಲ್ಲಿ ನೆರೆದಿದ್ದ ವಿದ್ಯಾರ್ಥಿಗಳಲ್ಲಿ ನಗೆಯ ಹೊನಲು ಹರಿಯಿತು, ಎಂದು ಲೊಂಡೆಯವರು ಈಗಲೂ ಆ ಘಟನೆಯನ್ನು ಸ್ಮರಿಸಿಕೊಳ್ಳುತ್ತಾರೆ.

ಕೊಂಡಜ್ಜಿ ಬಸಪ್ಪನವರು ಎಲ್ಲೇ ಇರಲಿ ಯಾವುದೇ ಕೆಲಸ ಮಾಡುತ್ತಿರಲಿ ಅವರ ಮನಸ್ಸಿನಲ್ಲಿ ಸ್ಕೌಟ್ ಕ್ಯಾಂಪ್ ಬಗ್ಗೆ ಯೋಚನೆ ಇದ್ದೇ ಇರುತ್ತಿತ್ತು ಎಂದು ಅವರ ಮಗ ಷಣ್ಮುಖಪ್ಪ ನೆನಪಿಸಿಕೊಂಡರು. ರಾಮಯ್ಯನವರ ಪ್ರಕಾರ ಬಸಪ್ಪನವರು ಕೇವಲ ಕೊಂಡಜ್ಜಿಯ ಶಿಬಿರ ಕೇಂದ್ರದ ಬಗೆಗಷ್ಟೇ ಅಲ್ಲ ಎಲ್ಲಾ ಕೇಂದ್ರಗಳ ಬಗೆಗೂ ಅವರು ಆಲೋಚಿಸುತ್ತಿರುತ್ತಾರೆ. ಒಮ್ಮೆ ಬೆಂಗಳೂರಿನಲ್ಲಿ ಕಾರಿನಲ್ಲಿ ಪ್ರಯಾಣ ಮಾಡುತ್ತಿದ್ದಾಗ ನಿಷ್ಪ್ರಯೋಜಕವಾಗಿ ಬಿದ್ದಿದ್ದ ಒಂದು ಉಕ್ಕಿನ ಗೋಪುರ ಬೆಂಗಳೂರಿನ ಎಸ್ ಜೆ ಪಾಲಿಟಕ್ನಿಕ್ ಮುಂಭಾಗ ಕಂಡಿತು. ಕೊಂಡಜ್ಜಿ



ಅವರು ಕೂಡಲೇ ಕಾರು ನಿಲ್ಲಿಸಿ ಅದು ಯಾರಿಗೆ ಸೇರಿದ್ದು ಎಂದೆಲ್ಲಾ ತಿಳಿದರು. ಜಯಚಾಮರಾಜೇಂದ್ರ ಪಾಲಿಟೆಕ್ನಿಕ್‌ಗೆ ಸೇರಿದ ಆ ಗೋಪುರವನ್ನು ದೊಡ್ಡಬಳ್ಳಾಪುರದ ಬೆಸೆಂಟ್ ಪಾರ್ಕ್‌ಗೆ ಕೊಂಡೊಯ್ದರು. ಅದೀಗ ಕ್ಯಾಂಪಿನ ಎತ್ತರದ ಸಗೋಪುರವಾಗಿದೆ ಎಂದು ರಾಮಯ್ಯನವರು ಸ್ಮರಿಸಿಕೊಂಡರು. ದೇಶ ವಿದೇಶಗಳಲ್ಲಿ ಸಂಚರಿಸುವಾಗ ಕಂಡ ಸಸ್ಯಗಳನ್ನು ತಂದು ಸ್ಕೌಟ್ಸ್ ಕ್ಯಾಂಪ್‌ಸೈಟ್‌ನಲ್ಲಿ ತೋಟಗಾರಿಕೆ ಇಲಾಖೆಯವರ ಮಾರ್ಗದರ್ಶನದಲ್ಲಿ ನೆಡಿಸುತ್ತಿದ್ದರು ಎಂದು ಬಸಪ್ಪನವರ ಪುತ್ರ ಷಣ್ಮುಖಪ್ಪ ನೆನೆಯುತ್ತಾರೆ.

ಬಸಪ್ಪನವರು ಸ್ಕೌಟ್ಸ್ ಕ್ಯಾಂಪ್‌ಸೈಟ್‌ನಲ್ಲಿ ಕೆಲಸ ಮಾಡಿಸಿಕೊಳ್ಳಲು ಎಷ್ಟು ಬುದ್ಧಿವಂತರಾಗಿದ್ದರು ಎಂಬುದನ್ನು ಜಯಪ್ರಕಾಶ್ ಚಿಗಟೇರಿ ನೆನೆಯುತ್ತಾರೆ. ಪ್ರತಿ ಬಾರಿಯೂ ವಿ.ಐ.ಪಿ ಗಳನ್ನು ಕ್ಯಾಂಪ್ ಸೈಟ್‌ಗೆ ಆಹ್ವಾನಿಸುವುದರ ಮೂಲಕ ಆ ಪ್ರದೇಶದಲ್ಲಿ ಆಗಬೇಕಾದ ಸಣ್ಣ ಪುಟ್ಟ ಕೆಲಸಗಳನ್ನು ಮಾಡುವಂತೆ ಪ್ರೇರೇಪಿಸುತ್ತಿದ್ದರು, ತನ್ಮೂಲಕ ತರಬೇತಿ ಕೇಂದ್ರದಲ್ಲೂ ಆಗಬೇಕಾದ ಸಣ್ಣ ಪುಟ್ಟ ಕೆಲಸಗಳಿಗೆ ಕಾಯಕಲ್ಪ ಸಿಗುತ್ತಿತ್ತು. ಅವರು ಪ್ರತಿ ಸಾರಿ ನನ್ನನ್ನು ಕರೆದಾಗಲೂ ಯಾವುದೋ ಮಂತ್ರಿ ಬರುತ್ತಾರೆಂದೂ ಸಸಿಗಳನ್ನು ನೆಡಿಸಬೇಕು, ಅದಕ್ಕಾಗಿ ಸಸಿಗಳನ್ನು ಹೊಂದಿಸಿಕೊಂಡು ಬಾ ಎಂಬುದಾಗಿ ಹೇಳುತ್ತಿದ್ದರು. ಈ ಪ್ರಕ್ರಿಯೆ ಮೇಲಿಂದ ಮೇಲೆ ನಡೆಯುತ್ತಲೇ ಇತ್ತು. ಕಡೆಗೆ ನಾನೇ ನರ್ಸರಿ ಆರಂಭ ಮಾಡಿಬಿಟ್ಟೆ ಎಂದು ನಸುನಗುತ್ತಾ ನೆನಪಿಸಿಕೊಳ್ಳುತ್ತಾರೆ.

ಈಗ ಕ್ಯಾಂಪ್ ಸೈಟ್ ನೋಡಿದ ಯಾರೂ ಇದೊಂದು ಬೋಳು ಗುಡ್ಡಗಳಿದ್ದ ಕೊರಕಲು ಪ್ರದೇಶವಾಗಿತ್ತು ಎಂದೆಣಿಸಲು ಸಾಧ್ಯವೇ ಇಲ್ಲ. ಆ ಪರಿಯಾಗಿ ತರಬೇತಿ ಕೇಂದ್ರ ಹಸಿರಿನಿಂದ ಕಂಗೊಳಿಸುತ್ತಿದೆ. ಕೊಂಡಜ್ಜಿ ಬಸಪ್ಪನವರ ಮಕ್ಕಳು ಈಗಲೂ ಸ್ವಯಂಪ್ರೇರಣೆಯಿಂದ ಕ್ಯಾಂಪ್ ಕೆಲಸಗಳನ್ನು ಮಾಡುತ್ತಿದ್ದಾರೆ. ಕೊಂಡಜ್ಜಿ ಬಸಪ್ಪನವರು ಬಹಳಷ್ಟು ಕ್ಯಾಂಪ್ ಸೈಟ್‌ಗಳಲ್ಲಿ ತಂಗಿದ್ದರು. ಆದರೆ ಕೊಂಡಜ್ಜಿ ಕ್ಯಾಂಪ್ ಸೈಟ್‌ನಲ್ಲಿ ಒಮ್ಮೆಯೂ ಮಲಗುವ ಸಂದರ್ಭ ಬರಲೇ ಇಲ್ಲ. ಅವರು ಎಷ್ಟೋ ಬಾರಿ ಅಂದುಕೊಂಡರೂ ಅದು ಆಗಲಿಲ್ಲ. ಆದರೆ ಇಂದು ಕೊಂಡಜ್ಜಿಯ ಕ್ಯಾಂಪ್ ಸೈಟ್‌ನಲ್ಲಿಯೇ ಅವರು ಚಿರನಿದ್ರೆಯಲ್ಲಿದ್ದಾರೆ.



ಹಸಿವಾದಡೆ ಊರೊಳಗೆ ಬಿಕ್ಷಾನ್ನಗಳುಂಟು
ತೃಷೆಯಾದಡೆ ಕೆರೆ ಹಳ್ಳ ಬಾವಿಗಳುಂಟು
ಅಂಗಶೀತಕ್ಕೆ ಬಿಸಾಟ ಅರಿವೆಗಳುಂಟು
ಶಯನಕ್ಕೆ ಹಾಳು ದೇಗುಲಗಳುಂಟು
ಚನ್ನಮಲ್ಲಿಕಾರ್ಜುನಯ್ಯಾ, ಆತ್ಮಸಂಗಾತಕ್ಕೆ ನೀನೆನಗುಂಟು

–ಅಕ್ಕಮಹಾದೇವಿ

ಸಕಲೆಂಟು ಜೀವರಾಶಿಗಳೊಂದಿಗೂ ದಯೆ, ಅನುಕಂಪ ಮತ್ತು ಬಾಂಧವ್ಯ ತೋರುತ್ತಾ ವಚನ ಪರಂಪರೆಯ ಮಾರ್ಗವನ್ನು ಹೃದಯಾಂತರಾಳದಿಂದ ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಬದುಕಿದವರು ಕೊಂಡಜ್ಜಿ ಬಸಪ್ಪ. ಅವರಿಗೆ ಪರಿಚಯವಿರುವ ಪ್ರತಿಯೊಬ್ಬರೂ ಕೊಂಡಜ್ಜಿ ಅವರು ತಮ್ಮ ಕುಟುಂಬದ ಸದಸ್ಯರೇನೋ ಎಂಬಂತೆ ಮಾತನಾಡುತ್ತಿದ್ದರು ಎಂದೇ ಹೇಳುತ್ತಾರೆ.ಯುವ ಜನತೆ ಕೊಂಡಜ್ಜಿ ಅವರಲ್ಲಿ ಪಿತೃ ಸ್ವರೂಪಿಯನ್ನು ಕಂಡರೆ ಅವರ ಸಮಕಾಲೀನರು ಕೊಂಡಜ್ಜಿ ಬಸಪ್ಪನವರೊಳಗೊಬ್ಬ ಸಹೋದರನನ್ನು ಕಾಣುತ್ತಿದ್ದರು. ಶ್ರೀ ಬಸಪ್ಪನವರು ಪ್ರತಿಯೊಬ್ಬರೊಂದಿಗೂ ಆತ್ಮೀಯವಾಗಿರುತ್ತಿದ್ದರು, ಯಾರದೂ ಮನೆಗೆ ಊಟಕ್ಕೆ ಹೋಗುತ್ತೇನೆ ಎಂದು ಪ್ರೀತಿಯಂದ ಹೇಳುವ ಮೂಲಕ ಅಥವಾ ತೀರಾ ಹತ್ತಿರದ ಸಂಭಂದಿಯೇನೂ ಎಂಬಂತೆ ಮಾತನಾಡುವ ಮೂಲಕ ಅವರು ಎಲ್ಲರೊಳಗೊಬ್ಬರಾಗಿಬಿಡುತ್ತಿದ್ದರು.

"ನಾವು ಸ್ಕೌಟ್ಸ್ ಕೆಲಸಗಳಿಗೆ ಹೊಸ ಜಿಲ್ಲಾ ಕೇಂದ್ರಗಳಿಗೆ ಹೋದಕೂಡಲೇ ಕೊಂಡಜ್ಜಿ ಅವರು ಆಯಾ ಜಿಲ್ಲೆಯ ಸ್ಕೌಟ್ಸ್ ಅಧಿಕಾರಿಗಳಿಗೆ ನಿಮ್ಮ ಮನೆಗೆ ಮಧ್ಯಾಹ್ನದ ಊಟಕ್ಕೆ ಬರುವೆನೆಂದೂ, ಮತ್ತೊಬ್ಬರಿಗೆ ರಾತ್ರಿ ಊಟಕ್ಕೆ ಸೇರೋಣವೆಂದೂ, ಇನ್ನೂ ಒಬ್ಬರಿಗೆ ಬೆಳಗಿನ ಉಪಹಾರ ವ್ಯವಸ್ಥೆ ಮಾಡಿ ಎಂದು ಹೇಳಿಬಿಡುತ್ತಿದ್ದರು. ಅವರ ಆ ಪ್ರೀತಿಯ ಮಾತುಗಳು ಪ್ರತಿಯೊಬ್ಬರಿಗೂ ಹಿತವೆನಿಸುತ್ತಿತ್ತು. ಸ್ಕೌಟ್ಸ್‌ನ ಎಷ್ಟೋ ಕೆಲಸಗಳು ಕೊಂಡಜ್ಜಿ ಅವರ ಹೆಸರಿನಿಂದಲೇ ನಡೆದುಹೋಗಿವೆ ಎಂದು ರಾಮಯ್ಯ ನೆನಪಿಸಿಕೊಳ್ಳುತ್ತಾರೆ.

ಕೊಂಡಜ್ಜಿ ಬಸಪ್ಪನವರ ಎರಡನೆಯ ಮಗ ಷಣ್ಮುಖಪ್ಪ, ಬಸಪ್ಪನವರು ಕಾಲವಾದ ಬಹಳ ವರ್ಷಗಳ ನಂತರ ರಾಜ್ಯ ಸ್ಕೌಟ್ಸ್‌ನ ಮುಖ್ಯ ಆಯುಕ್ತರಾಗುವ ಮೂಲಕ ಕೊಂಡಜ್ಜಿ ಅವರಿಂದ ತೆರವಾದ ಸ್ಥಾನ ವಹಿಸಿಕೊಂಡವರು; ತಮ್ಮ ಮನೆ ಯಾವಾಗಲೂ ಜನರಿಗೆ ಮುಕ್ತವಾಗಿರುತ್ತಿತ್ತು ಎಂದು ಸ್ಮರಿಸಿಕೊಳ್ಳುತ್ತಾರೆ. ವಕೀಲ ಕಾಯಕದಲ್ಲಿದ್ದ ಕೊಂಡಜ್ಜಿ ಬಸಪ್ಪನವರ ಮಡದಿ ಸರ್ವಮಂಗಳಮ್ಮ 'ಸರ್ವಕ್ಕ' ಎಂದೇ ಎಲ್ಲರಿಗೆ ಚಿರಪರಿಚಿತರಾದವರು, ದೂರದ ಊರುಗಳಿಂದ ಕೊಂಡಜ್ಜಿ ಬಸಪ್ಪನವರ ಬಳಿ ಕೇಸುಗಳು ತರುತ್ತಿದ್ದವರಿಗೆ ಊಟ, ವಸತಿ ನೋಡಿಕೊಳ್ಳುವ ಹೆಚ್ಚಿನ ಜವಾಬ್ದಾರಿಯೂ ಅವರ ಮೇಲಿತ್ತು. ಒಬ್ಬ ನ್ಯಾಯವಾದಿಗೆ ಸಿಗುತ್ತಿದ್ದ ಸಂಭಾವನೆಯಿಂದ ದೂರುದಾರರಿಗೆ ಇಷ್ಟೆಲ್ಲಾ ಸವಲತ್ತುಗಳನ್ನು ಒದಗಿಸುತ್ತಿದ್ದರೆಂದರೆ ನನ್ನ ತಂದೆ ಮಂತ್ರಿ ಆದಾಗ ಬರುತ್ತಿದ್ದ ನಿರ್ದಿಷ್ಟ ಆದಾಯದಲ್ಲಿ ಹೇಗೆ ನಿರ್ವಹಿಸಲು ಸಾಧ್ಯವಾಯಿತು ಎಂದು ಈಗಲೂ ಆಶ್ಚರ್ಯವಾಗುತ್ತದೆ ಎನ್ನುತ್ತಾರೆ ಷಣ್ಮುಖಪ್ಪ. ಬಸಪ್ಪನವರಿಗೆ ಯಾವುದೋ ಒಂದು ದಿನ ಕೇಸುದಾರರಿಲ್ಲವೆನ್ನಿ, ನಗರಕ್ಕೆ ವಿಧ್ಯಾಭ್ಯಾಸಕ್ಕಾಗಿ ಬಂದು ಹಾಸ್ಟೆಲ್ ಸೀಟ್ ಕೇಳಿಕೊಂಡು ಬರುತ್ತಿದ್ದವರನ್ನು ಮನೆಗೆ ಕರೆತರುತ್ತಿದ್ದರು. ತಾವೇ ಹಾಸ್ಟೆಲ್ ರೂಮು ಕೊಡಿಸಲು ಯತ್ನಿಸಿ ಸಿಗದೇಹೋದ ಪಕ್ಷದಲ್ಲಿ, ಅವರಿಗೆ ಇನ್ನಾವ ಜಾಗವೂ ಇಲ್ಲವೆಂದಾದಲ್ಲಿ ನಮ್ಮ ಮನೆಗೇ ಕರೆದುಕೊಂಡು ಬರುತ್ತಿದ್ದದ್ದು ಸಾಮಾನ್ಯ. ಸ್ನೇಹಿತರು ಮತ್ತು ಸಹೊದ್ಯೋಗಿಗಳು ಒಂದೆರಡು ದಿನ ತಂಗುವುದು ನಡೆದೇ ಇತ್ತು, ವಿವಿಧ ಜಿಲ್ಲೆಗಳಿಂದ ಬರುತ್ತಿದ್ದ ಸ್ಕೌಟ್ಸ್ ಮತ್ತು ಗೈಡ್ಸ್‌ನ ಅಧಿಕಾರಿಗಳು ಬಂದು ಹೋಗುತ್ತಿದ್ದರು. ಇದಲ್ಲದೆ ಎಷ್ಟೋ ಮಂದಿ ಕೊಂಡಜ್ಜಿ ಬಸಪ್ಪನವರ ಮನೆಯ ಆಥಿತ್ಯ ಬಲ್ಲವರು ನಮ್ಮ ಮನೆಗೆ ಹೇಳದೇ ಕೇಳದೆ ಬಂದು ತಂಗುತ್ತಿದ್ದರು ಎಂದು ಷಣ್ಮುಖಪ್ಪ ನೆನಪಿಸಿಕೊಳ್ಳುತ್ತಾರೆ.

ಕೊಂಡಜ್ಜಿ ಬಸಪ್ಪನವರು ಒಬ್ಬ ಸಭ್ಯ ಹಾಗೂ ಗಂಭೀರವಾದ ಮೇಲಧಿಕಾರಿ. ಯಾವುದೇ ಸಂದರ್ಭದಲ್ಲಿ ಕೊಂಡಜ್ಜಿ ಅವರು ತಮ್ಮ ಸಹೊದ್ಯೋಗಿಗಳೊಂದಿಗೆ ಅಸಭ್ಯವಾಗಿ ಮಾತನಾಡಿದವರೇ ಅಲ್ಲ. ಒಂದಲ್ಲ ಎರಡು ಬಾರಿ ಹೇಳಿ ಅರ್ಥೈಸಿ ಕೆಲಸ ತೆಗೆದುಕೊಳ್ಳುತ್ತಿದ್ದರು ಎಂದು ಸ್ಕೌಟ್ಸ್ ಮತ್ತು ಗೈಡ್ಸ್‌ನ ಅಧಿಕಾರಿ ಜಯರಾಮ್ ನೆನಪಿಸಿಕೊಳ್ಳುತ್ತಾರೆ. ಕೇಂದ್ರ ಕಚೇರಿಯಲ್ಲಿ ಸಂಬಳ ಪಡೆದು ಕೆಲಸ ಮಾಡುತ್ತಿದ್ದ ಮಂದಿಯ ಅದಕ್ಷತೆಯನ್ನು ಕಂಡಾಗ ಅಪರೂಪಕ್ಕೊಮ್ಮೆ ಸಿಟ್ಟಾಗುತ್ತಿದ್ದರು. ಆ ಸಿಟ್ಟು ಕೇವಲ ಕ್ಷಣಮಾತ್ರ ಇರುತ್ತಿತ್ತು. ಮರುಕ್ಷಣ ಬಹಳ ಪ್ರೀತಿಯಿಂದ, ಆತ್ಮೀಯವಾಗಿ ಎಲ್ಲರನ್ನೂ ಕಾಣುತ್ತಿದ್ದರು ಎಂದು ಲೂಕಾಸ್ ನೆನಪಿಸಿಕೊಳ್ಳುತ್ತಾರೆ.

ಪ್ರತಿ ನಿತ್ಯ ತಮ್ಮ ಕೆಲಸಗಾರರು ಊಟ ಮಾಡಿದ್ದಾರ ಎಂದು ಕೇಳಿ ಖಾತ್ರಿಪಡಿಸಿಕೊಳ್ಳುತ್ತಿದ್ದ ಬಸಪ್ಪನವರು ಆಗಿಂದ್ದಾಗೆ ಕೆಲಸಗಾರರ ಕುಟುಂಬದ ಆರೋಗ್ಯದ ಬಗ್ಗೆ ವಿಚಾರಿಸಿಕೊಳ್ಳುತ್ತಿದ್ದರು ಎಂದು ಬಸಪ್ಪನವರೊಂದಿಗೆ 1971



ರಿಂದ ಕೆಲಸ ಮಾಡಿದ ಅಟೆಂಡರ್ ನರಸಿಂಹ ನೆನಪಿಸಿಕೊಳ್ಳುತ್ತಾರೆ. ಕೊಂಡಜ್ಜಿ ಬಸಪ್ಪನವರು ತಾವು ಊಟ ಮಾಡುವ ಮುನ್ನ ತಮ್ಮೆಲ್ಲಾ ಸಹೋದ್ಯೋಗಿಗಳು ಊಟ ಮಾಡಿದ್ದಾರಾ ಎಂದು ಖಾತ್ರಿಪಡಿಸಿಕೊಂಡ ನಂತರವಷ್ಟೇ ಊಟಮಾಡುತ್ತಿದ್ದರು ಎಂದು ನರಸಿಂಹ ಅವರ ಮಾತನ್ನು ರಾಮಯ್ಯನವರು ಪ್ರಮಾಣೀಕರಿಸುತ್ತಾರೆ.

1974ರಲ್ಲಿ ಕೊಂಡಜ್ಜಿ ಬಸಪ್ಪನವರು ಉಪಮಂತ್ರಿಗಳಾಗಿದ್ದಾಗ ಒಮ್ಮೆ ಗುಲ್ಬಾರ್ಗಾ ಜಿಲ್ಲಾ ಪ್ರವಾಸದಲ್ಲಿದ್ದೆವು. ಅಂದು ನಗರದ ಪ್ರೌಢಶಾಲಾ ಆವರಣದಲ್ಲಿ ಸಭೆ ನಡೆದಿತ್ತು. ಅನತಿದೂರದಲ್ಲಿ ಮರದ ಕೆಳಗೆ ನಿಂತಿದ್ದ ವ್ಯಕ್ತಿಯೊಬ್ಬನ ಬಳಿ ಹೋದ ಬಸಪ್ಪನವರು ಆತನನ್ನು ಕರೆತಂದು ಮಗ್ಗುಲಲ್ಲೇ ಕುಳ್ಳಿರಿಸಿಕೊಂಡರು. ಮಂತ್ರಿಗಳನ್ನು ನೋಡಲು ಬಂದ ಜಿಲ್ಲೆಯ ಅನೇಕ ಪ್ರಮುಖರೂ ಸೇರಿದಂತೆ ದೂರದ ಸಂಬಂಧಿಯೊಬ್ಬರು ಬಸಪ್ಪನವರನ್ನು ಮನೆಗೆ ಊಟಕ್ಕೆ ಆಹ್ವಾನಿಸಿದರು. ಅದಕ್ಕೆ ಬಸಪ್ಪನವರು ಸಾಧ್ಯವಾಗುವುದಿಲ್ಲವೆಂದೂ, ಈ ಅಟೆಂಡರ್ ನನ್ನ ಬಾಲ್ಯಕಾಲದ ಶಾಲೆಯ ಸ್ನೇಹಿತ, ನಾನು ಆತನ ಮನೆಗೆ ಊಟಕ್ಕೆ ಹೋಗುತ್ತೇನೆ ಎಂದು ಹೇಳಿದ್ದನ್ನು ಹೆಚ್.ವೈ. ರಾಮಯ್ಯ ನೆನಪುಮಾಡಿಕೊಳ್ಳುತ್ತಾರೆ.

ರಾಮಯ್ಯ ಮತ್ತು ಈ ಹಿಂದೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಕೆಲಸ ಮಾಡಿದ್ದ, ಕರ್ನಾಟಕ ರಾಜ್ಯ ಪರ್ವತಾರೋಹಣ ಸಂಘದ ಸಂಸ್ಥಾಪಕರಲ್ಲೊಬ್ಬರಾದ ರಾಮಯ್ಯನವರ ಪತ್ನಿ ಉಷಾ ರಾಮಯ್ಯನವರು ತಾವು ಅಂತರ್ಜಾತಿ ವಿವಾಹ ಆಗುವ ಸಂದರ್ಭದಲ್ಲಿ ನಮ್ಮ ಪರವಾಗಿ ನಿಂತ ಕೆಲವೇ ವ್ಯಕ್ತಿಗಳಲ್ಲಿ ಕೊಂಡಜ್ಜಿ ಬಸಪ್ಪನವರೊಬ್ಬರು ಎಂದು ಸ್ಮರಿಸಿಕೊಳ್ಳುತ್ತಾರೆ. ನಮಗೆ ಗೊತ್ತಿದ್ದವರೆಲ್ಲರೂ, ಪರ್ವತಾರೋಹಣ ಸಂಘದಲ್ಲಿ ಉಷಾ ಅವರ ಗುರುವಿನ ಸ್ಥಾನದಲ್ಲಿದ್ದವರೂ ನಮ್ಮ ಸಂಬಂಧವನ್ನು ಉಗ್ರವಾಗಿ ವಿರೋಧಿಸಿದ್ದರು. ವಿವಿಧ ರೀತಿಯಲ್ಲಿ ನಮ್ಮನ್ನು ಬೆದರಿಸಿದ್ದರು, ಆದರೆ ಕೊಂಡಜ್ಜಿ ಬಸಪ್ಪನವರು ಯಾವಾಗಲೂ ನಮ್ಮ ಬೆಂಬಲಕ್ಕಿದ್ದರು. ಅದು ಕೇವಲ ಮೂಕ ಬೆಂಬಲವಾಗಿರಲಿಲ್ಲ. ಅವರು ನನ್ನನ್ನು ಯಾರಿಗಾದರೂ ಪರಿಚಯ ಮಾಡುವಾಗ 'ಇವ ನನ್ನ ಮೇಷ್ಟ್ರ ಮಗಳ ಜೊತೆ ಓಡಿಹೋದವನು' ಎಂದು ಛೇಡಿಸುತ್ತಾ ಪರಿಚಯಿಸುತಿದ್ದರು. ಉಷಾಳ ತಂದೆ ಬಸಪ್ಪನವರಿಗೆ ಕಾಲೇಜಿನಲ್ಲಿ ಮೇಷ್ಟ್ರಾಗಿದ್ದರು. ಒಂದು ಬಿಗುವಿನ ವಾತಾವರಣವನ್ನು ತಾತ್ಸಾರ ಮಾಡದೆ ಅಗತ್ಯವೆನಿಸುವಷ್ಟು ಸರಳವಾಗಿಸಿ ಪ್ರಕಟಿಸುವ ಮೂಲಕ ಕೊಂಡಜ್ಜಿ ಬಸಪ್ಪನವರು ರಾಮಯ್ಯ ದಂಪತಿಗಳಿಗೆ ಬಹು ದೊಡ್ಡ ಸಹಾಯ ಮಾಡಿದ್ದಾರೆಂಬುದು ರಾಮಯ್ಯನವರ ಮಾತುಗಳಲ್ಲಿ ಪ್ರಕಟಗೊಳ್ಳುತ್ತದೆ.

ಕೊಂಡಜ್ಜಿ ಬಸಪ್ಪನವರು 1980ರಲ್ಲಿ ಲೋಕಸಭಾ ಚುನಾವಣೆಯಲ್ಲಿ ಪರಾಭವಗೊಂಡ ಮೇಲೆ ಎಂಟು ಮಕ್ಕಳೊಂದಿಗೆ; ಏಳು ಗಂಡು ಹಾಗೂ ಒಂದು ಹೆಣ್ಣು (ಎಲ್ಲರೂ ಚೆನ್ನಾಗಿ ಓದಿದ್ದರಾದರೂ ಹಣಕಾಸಿನಲ್ಲಿ ಎಲ್ಲರೂ ಕಷ್ಟದಲ್ಲಿದ್ದವರೇ) ಮಕ್ಕಳೊಂದಿಗೆ ಬದುಕು ಸಾಗಿಸಲು ಹಣಕಾಸಿನ ತೀವ್ರ ಬಿಕ್ಕಟ್ಟು ಎದುರಿಸುತ್ತಾರೆ. 1962 ರಿಂದ 1980 ರವರೆಗೆ ಎರಡು ದಶಕಗಳ ಕಾಲ ಎಂ.ಎಲ್.ಎ., ಎಂ.ಪಿ ಆಗಿದ್ದವರು ಸಾರ್ವಜನಿಕ ಜೀವನದಲ್ಲಿ ಎಂದೂ ಒಂಟಿಯಾಗಿರಲಿಲ್ಲ. ಆದರೆ ಹಣಕಾಸಿನ ತೀವ್ರ ಮುಗ್ಗಟ್ಟು ಅನುಭವಿಸಿದವರು.

ಮಗಳು ಮಂಜುಳಾ ಮದುಮೆ ಮಾಡುವುದು ಮತ್ತು ಗಂಡುಮಕ್ಕಳಿಗೆ ನೆಲೆ ಕಂಡುಕೊಡುವ ಪ್ರಕ್ರಿಯೆಯಲ್ಲಿ ಹಣಕಾಸಿನ ಬಿಕ್ಕಟ್ಟಿನಲ್ಲಿ ಸಿಲುಕಿದರು. ಬೆಂಗಳೂರಿನ ರಾಜಾಜಿನಗರದ ಡಾ. ರಾಜ್‌ಕುಮಾರ್ ರಸ್ತೆಯಲ್ಲಿ ತಮ್ಮದೆಂದಿದ್ದ ಏಕೈಕ ಆಸ್ತಿಯನ್ನು ಕೇವಲ ಐದು ಲಕ್ಷ ರೂಪಾಯಿಗಳಿಗೆ ಮಾರಾಟ ಮಾಡುವ ಹಂತಕ್ಕೆ ಹೋಗಿದ್ದರು. ಅದಾಗ ಬಸಪ್ಪನವರ ಎರಡನೆಯ ಮಗ ಷಣ್ಮುಖಪ್ಪ ಅವರು ಮದ್ಯಸ್ಥಿಕೆ ವಹಿಸಿ ಬೆಂಗಳೂರಿನ ಆಸ್ತಿಯ ಬದಲಾಗಿ ದಾವಣಗೆರೆಯ ಪ್ರಮುಖ ಬಡಾವಣೆಯಲ್ಲಿ ತಮ್ಮ ಹೆಸರಿನಲ್ಲಿದ್ದ ನಿವೇಶನ ಮಾರಾಟ ಮಾಡಿದರು.

1960-70ರ ದಶಕದಲ್ಲಿದ್ದ ನಟರಲ್ಲಿ ಬಹಳ ಸುಂದರವಾಗಿದ್ದವರ ಪೈಕಿ ಒಬ್ಬರಾದ ಬಹಳ ಪ್ರಸಿದ್ಧ ನಾಟಕ-ಸಿನೆಮಾ ನಟ ಹಾಗೂ ಪತ್ರಕರ್ತ ಕೊಂಡಜ್ಜಿ ಬಸಪ್ಪನವರ ಮೊದಲನೆಯ ಮಗ ರಾಜಶೇಖರ್, ಬಸಪ್ಪನವರ ಚಿಂತೆಗೆ ಕಾರಣರಾಗಿದ್ದರು. ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ವಿದ್ಯಾರ್ಥಿ ಘಟಕ ಎನ್.ಎಸ್.ಯು.ಐನ ಪ್ರಥಮ ಅಧ್ಯಕ್ಷರಾಗಿ ಆಯ್ಕೆ ಆಗಿದ್ದ ರಾಜಶೇಖರ್‌ಗೆ ರಾಜಕೀಯವಾಗಿ ಬಸಪ್ಪನವರು ಬೆಂಬಲಿಸಲಿಲ್ಲ. ಬಹುಶಃ ವಿರೋಧಿಸಿದರು ಕೂಡಾ. ರಾಜಶೇಖರ್ ಕನ್ನಡದ ಖ್ಯಾತ ನಟಿ ಕಲ್ಪನಾರೊಂದಿಗೆ ಮೂರು ಪ್ರಶಸ್ತಿ ವಿಜೇತ ಸಿನಿಮಾಗಳಲ್ಲಿ ನಟಿಸಿದರು.



ಎನ್. ಲಕ್ಷ್ಮೀನಾರಾಯಣರವರ 'ಮುಕ್ತಿ' ಆನಂತರ 'ನಮ್ಮ ಮಕ್ಕಳು' ಹಾಗೂ 'ಅನಿರೀಕ್ಷಿತ'. ಬಿ.ಆರ್. ಇಷಾರಾರವರ ಹಿಂದಿ ಸಿನಿಮಾ 'ನಹೀ ದುನಿಯಾ ನಹೀ ಲೋಗ್' ಚಿತ್ರದಲ್ಲಿ ಸಣ್ಣದೊಂದು ಪಾತ್ರ ಮಾಡಿದ್ದರು. ಎರಡು ಮಕ್ಕಳ ತಂದೆಯಾಗಿದ್ದ ರಾಜಶೇಖರ್ ತನ್ನ ವೈಯಕ್ತಿಕ ಬದುಕಿನಲ್ಲಿ ನೆಲೆ ಕಂಡುಕೊಳ್ಳಲಾಗದೆ ಅಶಕ್ತನಾಗಿದ್ದನ್ನು ಕಂಡು ಕೊಂಡಜ್ಜಿ ಬಸಪ್ಪ ಕೊರಗಿದರು. 1980 ರ ನಂತರ ಅವರು ಲೋಕಸಭಾ ಚುನಾವಣೆಯಲ್ಲಿ ಸೋತ ಮೇಲೆ ಕುಟುಂಬದ ವಿಚಾರಗಳಿಗೆ ಹೆಚ್ಚಿನ ಸಮಯವಿದ್ದ ಆ ದಿನಗಳಲ್ಲಿ ಅವರ ಕೊರಗು ದುಪ್ಪಟ್ಟಾಯಿತು.

ಇಂಥಹ ಹಣಕಾಸು ಮತ್ತು ವೈಯಕ್ತಿಕ ಬಿಕ್ಕಟ್ಟುಗಳು ಎದುರಾದ ಪರಿಸ್ಥಿತಿಯಲ್ಲಿ ಬಸಪ್ಪನವರು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ಮತ್ತು ಸೌಟ್ಸ್‌ನ ಮಕ್ಕಳೊಂದಿಗೆ ಬೆರೆತು ಬದುಕುವುದನ್ನು ಮುಂದುವರೆಸಿ ನೆಮ್ಮದಿ ಹರಸುತ್ತಿದ್ದರು. ಅವರ ಮಕ್ಕಳೇ ಹೇಳುವಂತೆ ಬಸಪ್ಪನವರಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ಬದುಕಿಗೆ ಸಂತೋಷ, ಶಾಂತಿ ಮತ್ತು ಅರ್ಥ ತಂದುಕೊಟ್ಟಿತ್ತು.

ಬಸಪ್ಪನವರ ಕಿರಿಯ ಮಗ ಮೋಹನ್ ಕುಮಾರ್ ಕೊಂಡಜ್ಜಿ ಅವರ ಪ್ರಕಾರ ಬಸಪ್ಪನವರು ಕಾಂಗ್ರೆಸ್ ಬಿಟ್ಟು ಜನತಾ ಪಕ್ಷ ಸೇರಿದ್ದು ಮತ್ತು ಆಂತರಿಕ ಗೊಂದಲಗಳಿಂದ ಹಿಂದಿನ ಸಿದ್ಧಾಂತವನ್ನೂ ಕಳೆದುಕೊಂಡ ಪಕ್ಷ ಅವರ ಬೇಸರವನ್ನು ಇಮ್ಮಡಿಗೊಳಿಸಲು ಕಾರಣವಾಗಿರಬಹುದು. ಇವೆಲ್ಲ ಅಂಶಗಳು ಬಸಪ್ಪನವರನ್ನು ಆರ್ಥಿಕವಾಗಿ, ರಾಜಕೀಯವಾಗಿ, ವೈಯಕ್ತಿಕವಾಗಿ ಮತ್ತು ದೈಹಿಕವಾಗಿ ನರಳಿಸಿದ್ದವು.

ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಮಕ್ಕಳೊಂದಿಗಿದ್ದು ಬೆರೆತುಹೋಗಿದ್ದ ಕೊಂಡಜ್ಜಿ ಬಸಪ್ಪನವರು ನವೆಂಬರ್ 14 1982ರ ಮಕ್ಕಳ ದಿನಾಚರಣೆಯಂದು ಇಹಲೋಕ ತ್ಯಜಿಸಿದರು.

ಅವರು ಆಸ್ಪತ್ರೆಗೆ ದಾಖಲಾಗಿದ್ದಾಗ, ಇನ್ನೇನು ಮಾತನಾಡಲೂ ಸಾಧ್ಯವಾಗದ ಪರಿಸ್ಥಿತಿಯಲ್ಲಿದ್ದಾಗಲೂ ಕೆಲಸ ಮಾಡುವುದನ್ನು ನಿಲ್ಲಿಸಿರಲಿಲ್ಲ. ಚಿಗಟೇರಿ ಸಹೋದರರು, ಬಸಪ್ಪನವರ ಮಕ್ಕಳು, ಸ್ಕೌಟ್ಸ್ ಪದಾಧಿಕಾರಿಗಳು ಇನ್ನಿತರರು ಕೊಂಡಜ್ಜಿ ಬಸಪ್ಪನವರು ಬರೆದು ತೋರಿಸುತ್ತಿದ್ದದ್ದನ್ನು ಈ ರೀತಿಯಾಗಿ ಸ್ಮರಿಸಿಕೊಳ್ಳುತ್ತಾರೆ; " ಇಂಥ ಕೆಲಸ ಆಗಿದೆಯೇ..? ಆ ಕೆಲಸ ಏನಾಯಿತು..? ಹೀಗೆ ಕೆಲಸದ ಹಿಂದೆ ಬೀಳುತ್ತಿದ್ದರು, ಜೊತೆಗೆ ಮುಂದೇನಾಗಬೇಕು ಎಂದು ತಿಳಿಸುತ್ತಿದ್ದದ್ದನ್ನು ಷಣ್ಮುಖಪ್ಪ ಸ್ಮರಿಸಿಕೊಳ್ಳುತ್ತಾರೆ.

ಕೊಂಡಜ್ಜಿ ಬಸಪ್ಪನವರ ಐದನೆಯ ಮಗ ಲಿಂಗರಾಜ್, ದಾವಣಗೆರೆಯಲ್ಲಿ ಮನೆ ಕಟ್ಟುತ್ತಿರುವಾಗ ಬಸಪ್ಪನವರ ಜೊತೆಯಲ್ಲಿಯೇ ವಾಸವಿದ್ದುಕೊಂಡು ಕೊನೆಗಾಲದಲ್ಲಿ ಅಮ್ಮನ ಜೊತೆಯಾಗಿ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಬಸಪ್ಪನವರು ಕಾಲವಾಗುವ ತನಕ ಆರೈಕೆಯಲ್ಲಿ ತೊಡಗಿದರು.

ಕೊಂಡಜ್ಜಿ ಬಸಪ್ಪನವರು ತಮ್ಮ 67 ನೆಯ ವಯಸ್ಸಿನಲ್ಲಿ ಕಾಲವಾದಾಗ ಅವರ ಸಾವಿಗೆ ಅನೇಕರು ಕಂಬನಿ ಮಿಡಿದರು. ಬಸಪ್ಪನವರನ್ನು ಬಲ್ಲ ಪ್ರತಿಯೊಬ್ಬರೂ ಬಸಪ್ಪನವರಂಥವರನ್ನು ಕಳೆದುಕೊಳ್ಳುವುದೆಂದರೆ ಸ್ವಾರ್ಥವಿಲ್ಲದ, ಯಾವುದೇ ಕೆಲಸಕ್ಕೆ ಕೈ ಹಾಕಿದ ಮೇಲೆ ಅದಕ್ಕೆ ಉತ್ತಮ ಪ್ರತಿಫಲ ತರುವ, ಯಾವ ಗೌರವ ಪುರಸ್ಕಾರಗಳನ್ನೂ ಬಯಸದ ವ್ಯಕ್ತಿಯೊಬ್ಬ ಹೋದ ಮೇಲೆ ಕರ್ನಾಟಕದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯಲ್ಲಿ ಒಬ್ಬ ಅದ್ಭುತ, ಧೀಮಂತ, ಗಟ್ಟಿತನದ, ಅಭಿವೃದ್ಧಿ ಪಥದ ನಾಯಕನ ಯುಗ ಮುಗಿದಂತಾಯಿತು ಎಂದೇ ಹೇಳುತ್ತಾರೆ.

ಕೊಂಡಜ್ಜಿ ಬಸಪ್ಪನವರಂತೆ ಬದುಕಿ ಹೋದವರು ಬಹಳ ವಿರಳ. ಅಂಥವರು ತಮ್ಮ ಸುತ್ತ ಮುತ್ತಲಿನ ಜನರ ಬದುಕಿನಲ್ಲಿ ಆಶಾ ಕಿರಣ ಮೂಡಿಸುತ್ತಾರೆ, ನಮ್ಮೊಂದಿಗಿದ್ದಾಗ ನಮ್ಮ ನಡೆ ಮತ್ತು ಬದ್ಧತೆಗಳನ್ನು ಪ್ರೇರೇಪಿಸುತ್ತಾರೆ, ಅವರು ಕಾಲವಾದ ನಂತರ ಅವರ ದೈಹಿಕ ನಿರ್ಗಮನ ನಮ್ಮನ್ನು ದುಃಖದಾಯಕವಾಗಿಸುತ್ತದೆ. ಕೊಂಡಜ್ಜಿ ಅವರು ಕಾಲವಾದ ಸಂದರ್ಭದಲ್ಲಿ ಬಸಪ್ಪನವರ ಸ್ನೇಹಿತ ಮಾಜಿ ನ್ಯಾಯಾಮೂರ್ತಿಗಳಾದ ಶ್ರೀ ಮೀರ್ ಇಕ್ಬಾಲ್ ಹುಸೇನ್ 'ನಾನು ನನ್ನ ಅತ್ಯುತ್ತಮ ಸ್ನೇಹಿತನನ್ನು ಕಳೆದುಕೊಂಡೆ, ಸ್ಕೌಟ್ಸ್ ಮತ್ತು ಗೈಡ್ಸ್ ಒಬ್ಬ ಸರ್ವೋತ್ಕೃಷ್ಟ ಮುಖ್ಯ ಆಯುಕ್ತರನ್ನು ಕಳೆದುಕೊಂಡಿತು' ಎಂದು ಹೇಳುತ್ತಾರೆ.



# ಶಿಕ್ಷಣ ಕ್ಷೇತ್ರಕ್ಕೆ
## ಕೊಂಡಜ್ಜಿ ಬಸಪ್ಪನವರ ಕೊಡುಗೆ

ಬಸಪ್ಪನವರು ಮೂಲತಃ ಶಿಕ್ಷಣ ಪ್ರೇಮಿಗಳು. ಜನಸಾಮಾನ್ಯರ ಶೋಷಣೆ ಅಜ್ಞಾನಗಳಿಗೆ ಅವರಲ್ಲಿ ವಿದ್ಯಾಭ್ಯಾಸ ಇಲ್ಲದಿರುವುದೇ ಕಾರಣವೆಂದು ಅವರು ನಂಬಿದ್ದರು. ಹಾಗೆಂದೇ ಅವರು ಶಿಕ್ಷಣಕ್ಕೆ ಹೆಚ್ಚು ಆದ್ಯತೆ ನೀಡಿದರು. ವಯಸ್ಕರ ಶಿಕ್ಷಣಕ್ಕೆ ಹೆಚ್ಚು ಒತ್ತು ಕೊಟ್ಟು ಪ್ರೋತ್ಸಾಹಿಸಿದರು. ಯುವ ಪ್ರತಿಭೆಗಳ ಬಗ್ಗೆ ಅವರಿಗೆ ಎಲ್ಲಿಲ್ಲದ ಕಾಳಜಿ. ಅರ್ಹರಿಗೆಲ್ಲಾ ಶಿಷ್ಯ ವೇತನ ಕೊಡಿಸಿದರು. ಕರೆದು ಕೆಲಸ ಕೊಡಿಸಿದ ಮಂದಿ ಅದೆಷ್ಟೋ.

ರಾಜಕಾರಣಿಯಾಗಿ, ಸಮಾಜ ಸೇವಕರಾಗಿ ಕೊಂಡಜ್ಜಿ ಬಸಪ್ಪನವರು ಅನೇಕ ಜವಾಬ್ದಾರಿಗಳನ್ನು ನಿರ್ವಹಿಸಿದವರು. ಶಿಕ್ಷಣ ಕ್ಷೇತ್ರಕ್ಕೆ ಅವರು ಮಾಡಿದ ಕೆಲವು ಕೆಲಸಗಳನ್ನು ಇಲ್ಲಿ ದಾಖಲಿಸಲಾಗಿದೆ.

- ಚಿತ್ರದುರ್ಗ ಲಂಬಾಣಿ ಹಾಸ್ಟೆಲ್‌ನ ಕಾರ್ಯದರ್ಶಿಯಾಗಿದ್ದರು.
- ದಾವಣಗೆರೆಯ ಚಲವಾದಿ ಹಾಸ್ಟೆಲ್‌ನ ಸಂಸ್ಥಾಪಕ ಕಾರ್ಯದರ್ಶಿಯಾಗಿದ್ದರು
- ದಾವಣಗೆರೆಯ ಹರಿಜನ ಹಾಸ್ಟೆಲ್‌ನ ಸಂಸ್ಥಾಪಕ ಕಾರ್ಯದರ್ಶಿಯಾಗಿದ್ದರು.
- ಹತ್ತು ವರ್ಷಗಳ ಕಾಲ ಚಿತ್ರದುರ್ಗ ಜಿಲ್ಲಾ ವಯಸ್ಕರ ಶಿಕ್ಷಣ ಸಮಿತಿಯ ಕಾರ್ಯದರ್ಶಿ.
- 1950-60ರವರೆಗೆ ಎರಡು ಅವಧಿಗೆ ಮೈಸೂರು ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯರು.
- ಸಾಧು ವೀರಶೈವ ಹಾಸ್ಟೆಲ್ ಸೆಕ್ರೆಟರಿ.
- ಸಿರಿಗೆರೆ ಪ್ರೌಢಶಾಲೆಯ ಸಂಸ್ಥಾಪಕ ಕಾರ್ಯದರ್ಶಿ.
- ಸಿರಿಗೆರೆಯ ತರಳಬಾಳು ಬೃಹನ್ಮಠದ "ತರಳಬಾಳು" ನಿಧಿ ಸಮಿತಿಯ ಸಂಸ್ಥಾಪಕ ಅಧ್ಯಕ್ಷರು.
- 1950 ರಿಂದ ಆರು ವರ್ಷಗಳ ಕಾಲ ರಾಜ್ಯದ ಸೆಕೆಂಡರಿ ಶಿಕ್ಷಣ ಬೋರ್ಡಿನ ಸದಸ್ಯರು.
- ಸರ್ಕಾರಿ ವೈದ್ಯಕೀಯ ಮತ್ತು ಇಂಜಿನಿಯರಿಂಗ್ ಕಾಲೇಜುಗಳ ಪ್ರವೇಶ ಸಮಿತಿಗಳ ಸದಸ್ಯರು.
- ಅಧ್ಯಕ್ಷರು, ಕರ್ನಾಟಕ ಪರ್ವತಾರೋಹಣ ಸಂಘ.
- 1968-71 ಕೃಷಿ ವಿಶ್ವವಿದ್ಯಾಲದ ಆಡಳಿತ ಮಂಡಳಿ ಸದಸ್ಯರು.



# ಪ್ರೀತಿ, ಸಹನೆ, ವಿಶ್ವಾಸ ಮತ್ತು ಸಮನ್ವಯಗಳ ಸಾಕಾರಮೂರ್ತಿ ಕೊಂಡಜ್ಜಿ ಬಸಪ್ಪ

ಕೊಂಡಜ್ಜಿ ಎಂದೇ ಜನಪ್ರಿಯರಾಗಿದ್ದ ಶ್ರೀ ಕೊಂಡಜ್ಜಿ ಬಸಪ್ಪನವರು ಕಾಯಕದಲ್ಲಿ ಜೀವನ ಸೌಂದರ್ಯವನ್ನು ಕಂಡ ಒಬ್ಬ ಕರ್ಮಯೋಗಿ. ಚಿತ್ರದುರ್ಗ ಜಿಲ್ಲೆಯ ಹರಿಹರ ತಾಲ್ಲೂಕಿನ ಕೊಂಡಜ್ಜಿ ಗ್ರಾಮದಲ್ಲಿ ಇವರು ಜನಿಸಿದರು. ಬೆಂಗಳೂರು ಮತ್ತು ಪುಣೆಯಲ್ಲಿ ವಿದ್ಯಾಭ್ಯಾಸ ಮಾಡಿ ಬಿ.ಎಸ್.ಸಿ., ಎಲ್.ಎಲ್.ಬಿ ಪದವಿಗಳನ್ನು ಗಳಿಸಿದರು. 1941ರಲ್ಲಿ ದಾವಣಗೆರೆಯಲ್ಲಿ ವಕೀಲಿ ವೃತ್ತಿಯನ್ನಾರಂಭಿಸಿದ ಇವರು ಅಂದಿನಿಂದಲೇ ಸಾರ್ವಜನಿಕ ಸೇವಾ ಕ್ಷೇತ್ರಕ್ಕೆ ಇಳಿದರು. 1942ರಲ್ಲಿಯೇ ಚಿತ್ರದುರ್ಗ ಜಿಲ್ಲೆಯ ಸಹಾಯಕ ಜಿಲ್ಲಾ ಸ್ಕೌಟ್ಸ್ ಕಮಿಷನರ್ ಆಗಿ ಸ್ಕೌಟ್ಸ್ ಚಳವಳಿಯ ಸಂಪರ್ಕ ಹೊಂದಿ ಆ ಕ್ಷೇತ್ರದಲ್ಲಿ ವಿಶಿಷ್ಟ ಸೇವೆಯನ್ನು ಕೊನೆಯವರೆಗೂ ಸಲ್ಲಿಸಿದರು. ಮುಂದೆ ಜಿಲ್ಲೆಯ ಸ್ಕೌಟ್ಸ್ ಕಮಿಷನರ್ ಆಗಿ ಸ್ಕೌಟ್ಸ್ ಚಳವಳಿಯ ಸಂಪರ್ಕ ಹೊಂದಿ ಆ ಕ್ಷೇತ್ರದಲ್ಲಿ ವಿಶಿಷ್ಟ ಸೇವೆಯನ್ನು ಕೊನೆಯವರೆಗೂ ಸಲ್ಲಿಸಿದರು. ಮುಂದೆ ಜಿಲ್ಲೆಯ ಸ್ಕೌಟ್ಸ್ ಕಮಿಷನರ್ ಆಗಿ 1951 ರಲ್ಲಿ ಆಸ್ಟ್ರಿಯಾ, ಇಟಲಿ, ಸ್ವಿಟ್ಜರ್‌ಲ್ಯಾಂಡ್, ಜರ್ಮನಿ, ಫ್ರಾನ್ಸ್, ಬ್ರಿಟನ್, ಬೆಲ್ಜಿಯಂ, ಡೆನ್ಮಾರ್ಕ್ ಮೊದಲಾದ ದೇಶಗಳಿಗೆ ಭೇಟಿಯಿತ್ತು ಅಪಾರವಾದ ಅನುಭವವನ್ನು ಹೊಂದಿದರು.

ಸ್ಕೌಟ್ಸ್ ವಿಭಾಗದಲ್ಲಿ ಹೇಗೋ ಹಾಗೆ ಸಹಕಾರ ಕ್ಷೇತ್ರದಲ್ಲಿಯೂ ಇವರ ಸೇವೆ ಅನುಪಮವಾದುದು. ರಾಜಕೀಯ ಕ್ಷೇತ್ರದಲ್ಲಿಯೂ ಸಹ ಇವರು ಅವಿಸ್ಮರಣೀಯ ಸೇವೆ ಸಲ್ಲಿಸಿದ್ದಾರೆ. 1962 ರಲ್ಲಿ ಮೈಸೂರು ವಿಧಾನ ಸಭೆಗೆ ಆಯ್ಕೆಯಾಗಿ ಸಹಕಾರ ಮತ್ತು ವಾರ್ತಾ ಇಲಾಖೆಯ ಉಪಮಂತ್ರಿ ಆದರು. 1971ರಲ್ಲಿ ಲೋಕಸಭಾ ಸದಸ್ಯರಾಗಿ ಆಯ್ಕೆಯಾದ ಇವರು ಕೇಂದ್ರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಯೋಜನಾ ಇಲಾಖೆಯ ಉಪಮಂತ್ರಿ ಆಗಿ ಸೇವೆ ಸಲ್ಲಿಸಿದರು. ಮನಿಲಾದಲ್ಲಿ ನಡೆದ ಅಂತಾರಾಷ್ಟ್ರಿಯ ಕುಟುಂಬ ಯೋಜನೆ ಸಮ್ಮೇಳನದಲ್ಲಿ ಭಾರತ ತಂಡದ ನಾಯಕರಾಗಿ ಭಾಗವಹಿಸಿದರು. 1977ರಲ್ಲಿ ಮತ್ತೆ ಲೋಕಸಭೆಯ ಸದಸ್ಯರಾಗಿ ಆಯ್ಕೆಯಾದರು.

ಶ್ರೀ ಕೊಂಡಜ್ಜಿಯವರು ಭಾರತ್ ಸ್ಕೌಟ್ಸ್ ಹೆಡ್‌ಕ್ವಾರ್ಟರ್ಸ್ ಕಮೀಷನರ್, ರಾಜ್ಯ ಕಾರ್ಯದರ್ಶಿ, ಸ್ಟೇಟ್ ಚೀಫ್ ಕಮೀಷನರ್ ಆಗಿ ಗಣನೀಯ ಸೇವೆ ಸಲ್ಲಿಸಿದರು. 1976ರಲ್ಲಿ ಬಸಪ್ಪನವರಿಗೆ ಸಾರ್ವಜನಿಕರು ತಮ್ಮ ಶಷ್ಠಬ್ದಿ ಕಾರ್ಯಕ್ರಮದಲ್ಲಿ ನೀಡಿದ ಒಂದು ಲಕ್ಷ ಹಣವನ್ನು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಬೆಳವಣಿಗೆಗಾಗಿ ನೀಡಿದರು. ಸ್ಕೌಟ್ಸ್ ಕ್ಷೇತ್ರದಲ್ಲಿ ಸಲ್ಲಿಸಿದ ವಿಶಿಷ್ಟ ಸೇವೆಗಾಗಿ 'ಬೆಳ್ಳಿಯ



ಆನೆ' ರಾಷ್ಟ್ರೀಯ ಪ್ರಶಸ್ತಿಯನ್ನು ಪಡೆದ ಗೌರವಾನ್ವಿತರು. ಕೊಂಡಜ್ಜಿಯಲ್ಲಿ 'ಜಲದರ್ಶಿನಿ ಜ್ಞಾನಪೀಠ'ವನ್ನು 1976ರಲ್ಲಿ ಸ್ಥಾಪಿಸಿ ಅದರ ಸ್ಥಾಪಕ ಅಧ್ಯಕ್ಷರಾದರು. ಹುಟ್ಟಿದ ಹಳ್ಳಿಗೆ ಅವರು ಸಲ್ಲಿಸಿದ ಸೇವೆ ಅಪಾರ.

ರಾಜಕೀಯ, ಸಾಮಾಜಿಕ ಸೇವಾ ಕ್ಷೇತ್ರದಲ್ಲಿ, ಸ್ಕೌಟ್ಸ್ ವಿಭಾಗದಲ್ಲಿ ಸಹಕಾರ ಕ್ಷೇತ್ರದಲ್ಲಿ ಅಭೂತಪೂರ್ವವಾದ ಸೇವೆ ಸಲ್ಲಿಸಿದ ಕೊಂಡಜ್ಜಿಯವರ ಸ್ನೇಹಪರತೆ, ಶಿಸ್ತು, ಸಭ್ಯತೆ, ಸಮಚಿತ್ತತೆ ಇವುಗಳಿಗೆ ಮನೆ ಮಾತಾಗಿದ್ದರು.

ಕರ್ನಾಟಕದ ಸಾರ್ವಜನಿಕ ಕ್ಷೇತ್ರದಲ್ಲಿ ಒಂದು ಸ್ಮರಣೀಯ ಹೆಸರು ಕೊಂಡಜ್ಜಿ ಬಸಪ್ಪ. ಹಳ್ಳಿಯ ಬದುಕಿನೊಂದಿಗೆ ಬೆಳೆದು ಬಂದ ಅವರ ಜೀವನ ಸಾರ್ವಜನಿಕರ ಎದುರಿಗೆ ತೆರೆದಿಟ್ಟ ಒಂದು ಸರಳ ಗ್ರಂಥ. ಹುಟ್ಟಿನೊಂದಿಗೆ ಮೈಗೂಡಿಸಿಕೊಂಡಿದ್ದ ಸ್ವಯಂ ಸೇವೆಯ ಸ್ಫೂರ್ತಿ, ದಣಿವೆನ್ನದ ಕಾರ್ಯಶ್ರದ್ಧೆ ಮತ್ತು ಅನನ್ಯ ಪ್ರಾಮಾಣಿಕತೆಗಳಿಂದ ಬದುಕಿನುದ್ದಕ್ಕೂ ಆದರ್ಶವಾಗಿದ್ದ ಅವರ ಜೀವನ ಸ್ನೇಹಪರತೆ, ಶಿಸ್ತು ಮತ್ತು ಸೌಜನ್ಯಗಳಿಗೆ ಒಂದು ಉಜ್ವಲ ಉದಾಹರಣೆ.

ಕೊಂಡಜ್ಜಿ ಬಸಪ್ಪನವರು ದುಡಿದ ಕ್ಷೇತ್ರಗಳು ಒಂದೆರಡಲ್ಲ. ಹಳ್ಳಿಯಿಂದ ದಿಲ್ಲಿಯವರೆಗೆ, ಸಾಮಾಜಿಕದಿಂದ ರಾಜಕೀಯದವರೆಗೆ, ಸಹಕಾರದಿಂದ ಸ್ಕೌಟ್ಸ್ ಚಳವಳಿಯವರೆಗೆ–ಹೀಗೆ ಸಮಷ್ಟಿ ಕ್ಷೇಮದ ಸರ್ವಕ್ಷೇತ್ರದಲ್ಲೂ ಅವರು ಸೇವೆ ಸಲ್ಲಿಸಿದ್ದಾರೆ. ವಕೀಲಿ ವೃತ್ತಿಯಿಂದ ಆರಂಭವಾದ ಅವರ ಸಾರ್ವಜನಿಕ ಜೀವನದಲ್ಲಿ ಕಂಡ ಸಿಹಿಗಿಂತಲೂ ಉಂಡ ಕಹಿಯೇ ಹೆಚ್ಚು. ಆದರೂ ಅವರು ಹತ್ತು ಜನರ ಹಿತ ಕಾಪಾಡಲು ಕೊನೆಯುಸಿರಿನವರೆಗೂ ದುಡಿದ ಶ್ರೇಷ್ಠಜೀವ.

ಹುಟ್ಟಿದ ಊರು ಕೊಂಡಜ್ಜಿ ಇರಲಿ, ಸೇವೆ ಸಲ್ಲಿಸಿದ ಚಿತ್ರದುರ್ಗ, ದಾವಣಗೆರೆ ಜಿಲ್ಲೆಯಿರಲಿ ಅಥವಾ ಇಡೀ ಕರ್ನಾಟಕ ರಾಜ್ಯವೇಇರಲಿ, ಅವರ ಪರಿಶುದ್ಧ ಸೇವಾಹಸ್ತದ ಪರಿಚಯ ಇಲ್ಲದವರಿಲ್ಲ. ಗ್ರಾಮಾಂತರ ಪ್ರದೇಶದ ಅಭಿವೃದ್ಧಿಗಾಗಿ, ದೀನದಲಿತರ ಏಳಿಗೆಗಾಗಿ, ಯುವಜನಾಂಗದ ಕ್ಷೇಮಕ್ಕಾಗಿ, ರೈತರ ನೆಮ್ಮದಿಗಾಗಿ ಕೊಂಡಜ್ಜಿ ಬಸಪ್ಪನವರಿಂದ ಸಂದಿರುವ ಸೇವೆ ಅನುಪಮವಾದುದು. ಎಲ್ಲಕ್ಕಿಂತ ಮಿಗಿಲಾದುದೆಂದರೆ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಅವರು ಸಲ್ಲಿಸಿರುವ ಅದ್ವಿತೀಯ ಸೇವೆ. ಸ್ಕೌಟ್ಸ್–ಗೈಡ್ಸ್ ಚಳವಳಿ ಅವರ ಉಸಿರಾಗಿತ್ತು.

ಶಾಸಕರಾಗಿ, ರಾಜ್ಯ ಮತ್ತು ಕೇಂದ್ರ ಸರ್ಕಾರಗಳಲ್ಲಿ ಸಚಿವರಾಗಿ, ಲೋಕಸಭಾ ಸದಸ್ಯರಾಗಿ ಸೇವೆ ಸಲ್ಲಿಸಿದ ಕೊಂಡಜ್ಜಿ ಬಸಪ್ಪನವರು, ರಾಜಕಾರಣಿಗಳು ಶುದ್ಧ ಹಾಗೂ ಸರಳ ಜೀವನವನ್ನು ಹೇಗೆ ನಡೆಸಬಹುದೆಂಬುದಕ್ಕೆ ಜೀವಂತ ಸಾಕ್ಷಿಯಾಗಿದ್ದರು. ಜನಸಮುದಾಯವಿರಲಿ, ಸರ್ಕಾರಿ ಅಧಿಕಾರಿ ವರ್ಗವಿರಲಿ ಅವರಿಗಿದ್ದ ಸಂಪರ್ಕ ಅನನ್ಯವಾದುದು. ಪ್ರೇಮ, ವಿಶ್ವಾಸ, ಸಹನೆ, ಸಮನ್ವಯಗಳ ಸಾಕಾರಮೂರ್ತಿಯಾಗಿದ್ದ ಕೊಂಡಜ್ಜಿಯವರ ನೆನಪೇ ಒಂದು ಅನಿರ್ವಚನೀಯ ಅನುಭವ.

ರಾಜ್ಯ ಹಾಗೂ ರಾಷ್ಟ್ರ ಮಟ್ಟದ ಅನೇಕ ಸಮಿತಿಗಳಲ್ಲಿ ಸದಸ್ಯರಾಗಿ, ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದ ಕೊಂಡಜ್ಜಿ ಬಸಪ್ಪನವರು ವಿಶ್ವದ ಅನೇಕ ಪ್ರಮುಖ ರಾಷ್ಟ್ರಗಳ ಪರಿಚಯವನ್ನೂ ಪಡೆದಿದ್ದರು.

ಹಳ್ಳಿಗರ ಬದುಕಿನಲ್ಲಿ ನೆಮ್ಮದಿ ಮತ್ತು ಯುವಜನಾಂಗದಲ್ಲಿ ಶಿಸ್ತು ಸಭ್ಯತೆ ಇವು ಕೊಂಡಜ್ಜಿ ಬಸಪ್ಪನವರು ಹಗಲಿರುಳೂ ಚಿಂತಿಸುತ್ತಿದ್ದ ಎರಡು ಆಸೆಗಳು. ಆ ಆಸೆಗಳನ್ನು ಈಡೇರಿಸಲು ದಣಿವೆನ್ನದೆ ದುಡಿದ ಫಲವಾಗಿ ಅವರ ದೇಹ ಹಣ್ಣಾಯಿತು. ಕಾಲನ ಕರೆಗೆ ಓಗೊಟ್ಟು ಲೀನವಾದರು. ಆದರೂ ಅವರ ಸಂಪರ್ಕವಿದ್ದವರೆಲ್ಲರ ಮುಂದೆ ಅದೇ ಪ್ರಶಾಂತ ಸಮಚಿತ್ತದ ಮುಖಮುದ್ರೆ ಸುಳಿದಾಡುತ್ತಲೇ ಇದೆ. "ನನ್ನ ಕನಸು ಕೈಗೂಡಲು ನೀವಾದರೂ ಪ್ರಯತ್ನಿಸಿ" ಎಂದು ಹೇಳುತ್ತಲೇ ಇದೆ.



# ಕೊಂಡಜ್ಜಿ ಬಸಪ್ಪನವರು ನಡೆದು ಬಂದ ದಾರಿ...

1915: ಜನನ, ಕೊಂಡಜ್ಜಿ, ಹರಿಹರ ತಾಲ್ಲೂಕು.
1938: ಬಿ.ಎಸ್ಸಿ ಪದವಿ, ವಿವಾಹ.
1940: ಕಾನೂನು ಪದವಿ.
1941: ದಾವಣಗೆರೆಯಲ್ಲಿ ವಕೀಲಿ ವೃತ್ತಿ ಆರಂಭ.
1942: ಸ್ಕೌಟ್ಸ್ ಗೈಡ್ಸ್ ಸಹಾಯಕ ಆಯುಕ್ತರು, ದಾವಣಗೆರೆ.
1944–46: ಚಿತ್ರದುರ್ಗ ಜಿಲ್ಲಾ ಬೋರ್ಡ್ ಅಧ್ಯಕ್ಷರು.
1948: ಚಿತ್ರದುರ್ಗಾ ಜಿಲ್ಲಾ ಬೋರ್ಡ್ ಸದಸ್ಯರು, ಮೈಸೂರು ಮಹಾರಾಜರಿಂದ ಸಮಾಜ ಸೇವೆಗಾಗಿ ಬಂಗಾರದ ಪದಕ.
1950–60: ಮೈಸೂರು ವಿಶ್ವವಿದ್ಯಾಲಯದ ಆಡಳಿತ ಮಂಡಳಿ ಸದಸ್ಯತ್ವ, ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಆಯುಕ್ತರು, ಚಿತ್ರದುರ್ಗ ಜಿಲ್ಲೆ.
1951: ದಾವಣಗೆರೆ ಕೃಷಿ, ಕೈಗಾರಿಕಾ, ವಾಣಿಜ್ಯ ಮತ್ತು ಪರಿವರ್ತನಾ ಸಹಕಾರ ಸಂಘ ಸ್ಥಾಪನೆ. ಆಸ್ಟ್ರಿಯಾ ದೇಶದ ಸಾಲ್ಸ್‌ಬರ್ಗ‌ನಲ್ಲಿ ನಡೆದ ಏಳನೆಯ ವಿಶ್ವ ಸ್ಕೌಟ್ ಜಾಂಬೋರಿಯಲ್ಲಿ ಭಾರತದ ಪ್ರತಿನಿಧಿ.
1955: ಸ್ಕೌಟ್ಸ್ ಮತ್ತು ಗೈಡ್ಸ್ ಸಹಾಯಕ ರಾಜ್ಯ ಆಯುಕ್ತರು, ಚಿತ್ರದುರ್ಗ ವಿಭಾಗ.
1962: ಮೈಸೂರು ವಿಧಾನ ಸಭೆಗೆ ಆಯ್ಕೆ–ದಾವಣಗೆರೆ ಕ್ಷೇತ್ರದಿಂದ ಸ್ಕೌಟ್ಸ್ ಮತ್ತು ಗೈಡ್ಸ್ ಕೇಂದ್ರ ಕಾರ್ಯಾಲಯದ ಆಯುಕ್ತರು (ಸಾರ್ವಜನಿಕ ಸಂಪರ್ಕ), ಕರ್ನಾಟಕ ರಾಜ್ಯ ಸಹಕಾರ, ವಾರ್ತಾ ಮತ್ತು ಅಬಕಾರಿ ಇಲಾಖೆಗಳ ಉಪಸಚಿವರು.
1962–67: ರಾಜ್ಯ ಕೈಮಗ್ಗದ ಸಲಹಾ ಮಂಡಳಿ, ರಾಜ್ಯ ಉಗ್ರಾಣ ಮಂಡಳಿ, ಭಾರತ ಸೇವಕ್ ಸಮಾಜ, ಪಂಚಾಯಿತಿ ರಾಜ್ಯ ಅಧ್ಯಯನ ಸಮಿತಿಗಳ ಅಧ್ಯಕ್ಷರು.



1963: ರಾಜ್ಯದ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ರಾಜ್ಯ ಕಾರ್ಯದರ್ಶಿ.

1964–82: ರಾಜ್ಯ ಮುಖ್ಯ ಆಯುಕ್ತರು, ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್.

1967–70: ದಾವಣಗೆರೆ ಕ್ಷೇತ್ರದಿಂದ ಮೈಸೂರು ವಿಧಾನಸಭೆಗೆ ಪುನರಾಯ್ಕೆ.

1968: ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಸಲ್ಲಿಸಿದ ವಿಶಿಷ್ಟ ಸೇವೆಗಾಗಿ ರಾಷ್ಟ್ರೀಯ ಸಂಸ್ಥೆಯಿಂದ 'ಬೆಳ್ಳಿ ಆನೆ' ಪ್ರಶಸ್ತಿ.

1968–71: ಬೆಂಗಳೂರು ಕೃಷಿ ವಿಶ್ವವಿದ್ಯಾಲಯಲದ ಆಡಳಿತ ಮಂಡಳಿ ಸದಸ್ಯರು.

1969: ಮೈಸೂರು ಪ್ರದೇಶ ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿ.

1971: ಚಿತ್ರದುರ್ಗ ಕ್ಷೇತ್ರದಿಂದ ಲೋಕಸಭೆಗೆ ಆಯ್ಕೆ. ಕೊಂಡಜ್ಜಿ ಸ್ಕೌಟ್ಸ್ ಮತ್ತು ಗೈಡ್ಸ್ ಶಿಬಿರದ ಅಭಿವೃದ್ಧಿ ಕಾರ್ಯಾರಂಭ.

1972: ಕೇಂದ್ರ ಆರೋಗ್ಯ ಮತ್ತು ಕುಟುಂಬ ಯೋಜನಾ ಖಾತೆಯ ಉಪಸಚಿವರು.

1973: ನೈರೋಭಿಯಲ್ಲಿ ನಡೆದ ವಿಶ್ವ ಸ್ಕೌಟ್ಸ್ ಸಮ್ಮೇಳನದಲ್ಲಿ ಭಾರತದ ಪ್ರತಿನಿಧಿ.

1974: ಕುಟುಂಬ ಯೋಜನೆ ಕುರಿತು ಅಂತಾರಾಷ್ಟ್ರೀಯ ಸಮ್ಮೇಳನಕ್ಕೆ ಭಾರತ ತಂಡದ ನಾಯಕರಾಗಿ ಮನಿಲಾಕ್ಕೆ ಭೇಟಿ. ಥೈಲ್ಯಾಂಡ್, ಹಾಂಕಾಂಗ್ ರಾಷ್ಟ್ರಗಳಲ್ಲಿ ಪ್ರವಾಸ.

1976: ಬೆಂಗಳೂರಿನಲ್ಲಿ ಷಷ್ಟ್ಯಬ್ಧಿಪೂರ್ತಿ–ಸಾರ್ಥಕ ಬದುಕಿನ ಅಭಿನಂದನಾ ಸಮಾರಂಭ. ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಬೆಳವಣಿಗೆಗಾಗಿ ಸಾರ್ವಜನಿಕರಿತ್ತ ಒಂದು ಲಕ್ಷ ರೂಪಾಯಿ ಗೌರವ ಧನವನ್ನು ಸ್ಕೌಟ್ಸ್ ಸಂಸ್ಥೆಗೆ ನೀಡಿದರು.

1977: ಲೋಕಸಭೆಗೆ ಪುನರಾಯ್ಕೆ–ದಾವಣಗೆರೆ ಲೋಕಸಭಾ ಕ್ಷೇತ್ರದಿಂದ.

1982: ಸ್ಕೌಟ್ಸ್ ಗೈಡ್ಸ್ ಸಂಸ್ಥೆಗೆ ಸಲ್ಲಿಸಿದ ಗಣನೀಯ ಸೇವೆಗಾಗಿ ಕರ್ನಾಟಕ ರಾಜ್ಯ ಪ್ರಶಸ್ತಿ.

1982: 14ನೆಯ ನವೆಂಬರ್ 1982 ರಂದು ಬೆಂಗಳೂರಿನಲ್ಲಿ ನಿಧನ.





1969-70 ರಲ್ಲಿ ಶ್ರೀ ಬಾಬು ಜಗಜೀವನ್ ರಾಮ್, ಶ್ರೀ ದೇವರಾಜ್‌ಅರಸ್, ಶ್ರೀ ಹೆಚ್.ಎಂ. ಚನ್ನಬಸಪ್ಪ, ಶ್ರೀ ಬಿ. ಪರಮೇಶ್ವರಪ್ಪ (ಎಂ.ಎಲ್.ಎ) ಮತ್ತು ಕೆ. ರಂಗಪ್ಪ (ಎಂ.ಎಲ್.ಸಿ) ಅವರುಗಳೊಂದಿಗೆ ಬೆಳಗಿನ ಉಪಹಾರದ ಸಂದರ್ಭದಲ್ಲಿ.





1969-70 ರಲ್ಲಿ ಕಾಂಗ್ರೆಸ್ ಇಬ್ಭಾಗವಾದಾಗ ಚಿತ್ರದುರ್ಗದ ಮೆಜೆಸ್ಟಿಕ್ ವೃತ್ತದಲ್ಲಿ ಟ್ರಾಕ್ಟರ್ ರ್‍ಯಾಲಿಯಲ್ಲಿ ಪಾಲ್ಗೊಂಡಿದ್ದ ಶ್ರೀ ಕೊಲ್ಲೂರು ಮಲ್ಲಪ್ಪ, ಶ್ರೀ ಕೊಂಡಜ್ಜಿ ಬಸಪ್ಪ, ಶ್ರೀ ಬಾಬು ಜಗಜೀವನ್ ರಾಮ್ ಅಧ್ಯಕ್ಷರು, ಎ.ಐ.ಸಿ.ಸಿ ಕಾಂಗ್ರೆಸ್ (ಆರ್), ಶ್ರೀ ದೇವರಾಜ ಅರಸ್, ಶ್ರೀ ಹೆಚ್.ಎಂ. ಚನ್ನಬಸಪ್ಪ ಮತ್ತು ಶ್ರೀ ಕೆ.ರಂಗಪ್ಪ



1976ರಲ್ಲಿ ಭಾರತದ ಘನತೆವೆತ್ತ
ಉಪ ರಾಷ್ಟ್ರಪತಿಗಳಾದ
ಶ್ರೀ ಬಿ.ಡಿ. ಜತ್ತಿ ಅವರೊಂದಿಗೆ
ಶ್ರೀ ಕೊಂಡಜ್ಜಿ ಬಸಪ್ಪನವರು
ಕೊಂಡಜ್ಜಿ ತರಬೇತಿ ಕೇಂದ್ರದಲ್ಲಿ
ಚರ್ಚಿಸುತ್ತಿರುವುದು.

ಮೈಸೂರು ರಾಜ್ಯದಲ್ಲಿ
ಸಹಕಾರ ಉಪಸಚಿವರಾಗಿ
ಶ್ರೀ ಕೊಂಡಜ್ಜಿ ಬಸಪ್ಪನವರು





ರಾಜ್ಯದ ಉಪಸಚಿವರಾದ
ಶ್ರೀ ಕೊಂಡಜ್ಜಿ ಬಸಪ್ಪನವರು
ಭಾರತದ ಘನತೆವೆತ್ತ ರಾಷ್ಟ್ರಪತಿ
ಶ್ರೀ ಸರ್ವಪಲ್ಲಿ ರಾಧಾಕೃಷ್ಣನ್ ಅವರೊಂದಿಗೆ
ಚರ್ಚೆಯಲ್ಲಿ ತೊಡಗಿರುವುದು.



ಭಾರತದ ಪ್ರಧಾನ ಮಂತ್ರಿ
ಶ್ರೀಮತಿ ಇಂಧಿರಾ ಗಾಂಧಿ ಅವರೊಂದಿಗೆ
ಕರ್ನಾಟಕ ರಾಜ್ಯದ ಮುಖ್ಯಮಂತ್ರಿ
ಶ್ರೀ ಡಿ. ದೇವರಾಜ್ ಅರಸ್ ಮತ್ತು
ಶ್ರೀ ಕೊಂಡಜ್ಜಿ ಬಸಪ್ಪ



1972ರಲ್ಲಿ ಕೊಂಡಜ್ಜಿ ಬಸಪ್ಪನವರು ಕೇಂದ್ರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಉಪಸಚಿವರಾಗಿ ಪ್ರಮಾಣ ವಚನ ಸ್ವೀಕರಿಸಿದ ಸಂದರ್ಭ. ಪ್ರಮಾಣ ವಚನ ಭೋದಿಸುತ್ತಿರುವ ಘನತೆವೆತ್ತ ರಾಷ್ಟ್ರಪತಿಗಳಾದ ಶ್ರೀ ವಿ.ವಿ. ಗಿರಿ. ಪ್ರಧಾನಿ ಇಂದಿರಾ ಗಾಂಧಿ ಅವರು ಉಪಸ್ಥಿತರಿದ್ದರು.




ಕೇಂದ್ರ ಆರೋಗ್ಯ ಮತ್ತು ಕುಟುಂಬ
ಕಲ್ಯಾಣ ಇಲಾಖೆಯ ಉಪಮಂತ್ರಿ
ಶ್ರೀ ಕೊಂಡಜ್ಜಿ ಬಸಪ್ಪನವರು ಹಿರಿಯ
ಅಧಿಕಾರಿಗಳೊಂದಿಗೆ ನವದೆಹಲಿಯಲ್ಲಿ
ನಡೆಸಿದ ಸಭೆ-1973



ಚಿತ್ರದುರ್ಗದ ಶ್ರೀ ಎಸ್. ನಿಜಲಿಂಗಪ್ಪನವರ ಮನೆಯಲ್ಲಿ ಭಾರತದ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿ, ಶ್ರೀ ಎಸ್ ನಿಜಲಿಂಗಪ್ಪ ಮತ್ತು ಶ್ರೀಮತಿ ಶ್ರೀ ವೀರಭದ್ರಪ್ಪ ಜಿಗಟೇರಿ, ಶ್ರೀಮತಿ ಮುರಿಗೆಮ್ಮ ನಿಜಲಿಂಗಪ್ಪ, ಶ್ರೀ ಕೊಂಡಜ್ಜಿ ಬಸಪ್ಪ, ಶ್ರೀ ಜಿ.ವಿ.ನಾಗೇಶ್ ಶೆಟ್ಟಿ, ಶ್ರೀ ಕೊಟ್ರಪ್ಪ, ಶ್ರೀ ಜಿ.ಶಿವಪ್ಪ ಮತ್ತು ಶ್ರೀ ಕೊಂಡಜ್ಜಿ ಷಣ್ಮುಖಪ್ಪ ಉಪಸ್ಥಿತರಿದ್ದರು.



1973 ರಲ್ಲಿ ಫಿಲಿಫೈನ್ಸ್‌ನ ಮನಿಲಾದಲ್ಲಿ ನಡೆದ ಅಂತಾರಾಷ್ಟ್ರೀಯ ಕುಟುಂಬ ಕಲ್ಯಾಣ ಸಮಾವೇಶದಲ್ಲಿ ಭಾರತದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಉಪಸಚಿವರಾದ ಶ್ರೀ ಕೊಂಡಜ್ಜಿ ಬಸಪ್ಪನವರು ಭಾರತವನ್ನು ಪ್ರತಿನಿಧಿಸಿದ್ದರು. ಏಷ್ಯಾ ಖಂಡದ ಪ್ರತಿನಿಧಿಗಳೊಂದಿಗಿರುವ ಚಿತ್ರ.



1973 ರಲ್ಲಿ ಕೇಂದ್ರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಸಚಿವರಾದ ಡಾ.ಕರಣ್ ಸಿಂಗ್ ಹಾಗೂ ಕೇಂದ್ರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಉಪಮಂತ್ರಿಗಳಾದ ಶ್ರೀ ಕೊಂಡಜ್ಜಿ ಬಸಪ್ಪನವರು ಮೈಸೂರಿನ ಆಲ್ ಇಂಡಿಯಾ ಇನ್ಸ್ಟಿಟ್ಯೂಟ್ ಆಫ್ ಸ್ಪೀಚ್ ಅಂಡ್ ಹಿಯರಿಂಗ್‌ನ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸಂದರ್ಭ.



ರಾಜ್ಯ ಪ್ರಧಾನ ಕೇಂದ್ರದಲ್ಲಿ 'ಶ್ರೀ ಶಿವಶಂಕರ್ ವೃತ್ತ' ಉದ್ಘಾಟನಾ ಸಮಾರಂಭದಲ್ಲಿ ಶಿಕ್ಷಣ ಸಚಿವರಾದ ಶ್ರೀ ಎ.ಆರ್. ಬದರಿನಾರಾಯಣ್, ಮಾಜಿ ಮುಖ್ಯಮಂತ್ರಿ ಶ್ರೀ ಕೆ. ಹನುಮಂತಯ್ಯ, ಬೆಂಗಳೂರು ನಗರ ಪಾಲಿಕೆಯ ಆಡಳಿತಾಧಿಕಾರಿ ಶ್ರೀ ಎನ್. ಲಕ್ಷಣರಾವ್, ಡಾ. ಹೆಚ್. ನರಸಿಂಹಯ್ಯ ಹಾಗೂ ಕೊಂಡಜ್ಜಿ ಬಸಪ್ಪನವರು ಉಪಸ್ಥಿತರಿದ್ದರು.



1966ರಲ್ಲಿ ವಿಧಾನಸೌಧ ಸಭಾಂಗಣದಲ್ಲಿ ರಾಜ್ಯ ಸಹಕಾರಿ ಸಚಿವರಾದ ಶ್ರೀ ರಾಮಕೃಷ್ಣ ಹೆಗಡೆ, ಶ್ರೀ ಆರ್. ಭರಣಯ್ಯ, ಶ್ರೀ ಎಂ. ವಾಸುದೇವರಾವ್ ಮತ್ತು ಶ್ರೀ ಜಮಖಂಡಿಮಠ್ ಅವರೊಂದಿಗೆ ಶ್ರೀ ಕೊಂಡಜ್ಜಿ ಬಸಪ್ಪ



ಕೊಂಡಜ್ಜಿ ಸ್ಕೌಟ್ಸ್ ಆವರಣದಲ್ಲಿ " ಹರಿಹರ ಪಾಲಿಫೈಬರ್ಸ್ ಈಜುಕೊಳ" ಉದ್ಘಾಟನಾ ಸಮಾರಂಭದಲ್ಲಿ ಕರ್ನಾಟಕ ರಾಜ್ಯದ ಘನತೆವೆತ್ತ ರಾಜ್ಯಪಾಲರಾದ ಶ್ರೀ. ಮೋಹನ್‌ಲಾಲ್ ಸುಖಾಡಿಯಾ, ಮುಖ್ಯಮಂತ್ರಿ ಶ್ರೀ ಡಿ.ದೇವರಾಜ್ ಅರಸ್, ಸಂಸ್ಥೆಯ ಉಪಾಧ್ಯಕ್ಷರಾದ ನ್ಯಾಯಮೂರ್ತಿ ಮೀರ್ ಇಕ್ಬಾಲ್ ಹುಸೇನ್, ಧರ್ಮರತ್ನಾಕರ ಆರ್. ಮದ್ದುರಾಯಪ್ಪ, ಸ್ಕೌಟ್ಸ್‌ನ ರಾಜ್ಯ ಆಯುಕ್ತರಾದ ಶ್ರೀ ವಿ.ಪಿ. ದೀನದಯಾಳ್ ನಾಯ್ಡು, ಜಿಲ್ಲಾ ಆಯುಕ್ತರಾದ ಶ್ರೀ ಎಂ.ಕೆ.ಪಾಣಿ, ಶ್ರೀ ಕೆ.ರಂಗಪ್ಪ ಮತ್ತು ರಾಜ್ಯದ ಮುಖ್ಯಸ್ಥರಾದ ಶ್ರೀ ಕೊಂಡಜ್ಜಿ ಬಸಪ್ಪನವರು ಉಪಸ್ಥಿತರಿದ್ದರು.



ಸ್ಕೌಟ್ಸ್‌ನ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಸಪ್ಪನವರು ತಮ್ಮ ಗುರುಗಳಾದ ಶ್ರೀ. ಡಾ.ಎಸ್.ಜಿ. ಕೌಶಿಕ್ ಮತ್ತು ಡಾ. ಜಿ.ಪಿ.ರಾಜರತ್ನಂ ಅವರೊಂದಿಗಿನ ಸಂವಾದವನ್ನು ಗಂಭೀರವಾಗಿ ಗಮನಿಸುತ್ತಿರುವುದು.



ಚಿಕ್ಕಮಗಳೂರಿನಲ್ಲಿ ಸ್ಕೌಟ್ಸ್ ಭವನ ಉದ್ಘಾಟನಾ ಕಾರ್ಯಕ್ರಮದಲ್ಲಿ ಕರ್ನಾಟಕದ ಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪ ಹಾಗೂ ಸ್ಕೌಟ್ಸ್ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಸಪ್ಪನವರು, ಜಿಲ್ಲಾ ಆಯುಕ್ತರಾದ ಶ್ರೀ ಕೆ.ಆರ್. ಭರತ್ ಉಪಸ್ಥಿತರಿದ್ದರು.



1975 ಅಕ್ಟೋಬರ್ 18-23ರಂದು ಬಳ್ಳಾರಿಯ ಸಂಡೂರಿನಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಜಾಂಬೂರಿಯಲ್ಲಿ ಭಾಗವಹಿಸಿದ್ದ ಸಂಡೂರಿನ ಮಹಾರಾಜರಾದ ಶ್ರೀ ವೈ.ಆರ್. ಘೋರ್ಪಡೆ, ಶ್ರೀ ಮಲ್ಲಾರಾಧ್ಯ, ಶ್ರೀ ಗುಂಡೂರಾವ್, ಶ್ರೀಮತಿ ಆಕ್ಟೋವಿಯಾ ಅಲ್ಬುಕರ್ಕ್, ಸಂಸದ ಡಾ. ವಿ.ಕೆ.ಆರ್.ವಿ. ರಾವ್, ಶ್ರೀ ದೀನ್‌ದಯಾಳ್‌ನಾಯ್ಡು ಮತ್ತು ಶ್ರೀ. ಕೊಂಡಜ್ಜಿ ಬಸಪ್ಪ.



ಮಣಿಪಾಲ್ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾದ ಡಾ.ಟಿ.ಎಂ.ಎ. ಪೈ ಮತ್ತು ಟಿ. ರಮೇಶ್ ಪೈ ಅವರೊಂದಿಗೆ ಕೊಂಡಜ್ಜಿ ಬಸಪ್ಪನವರು. ಮಣಿಪಾಲ.



ಬೆಳಗಾವಿಯ ಘಟಪ್ರಭಾ ಸಹಕಾರ ಆಸ್ಪತ್ರೆಯ ಸ್ಥಾಪಕರಾದ ಡಾ. ಎನ್.ಎಸ್. ಹರ್ಡೀಕರ್ ಅವರೊಂದಿಗೆ ಕೇಂದ್ರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಉಪಸಚಿವರಾದ ಶ್ರೀ ಕೊಂಡಜ್ಜಿ ಬಸಪ್ಪ, ಸಚಿವರಾದ ಶ್ರೀ ಕೆ.ಹೆಚ್. ಪಾಟೀಲ್, ಮಾಜಿ ಸಚಿವರಾದ ಶ್ರೀ ಕೆ.ಎಫ್. ಪಾಟೀಲ್ ಮತ್ತಿತರರು.



ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರಾದ ಶ್ರೀ ಮಲ್ಲಿಕಾರ್ಜುನ ಖರ್ಗೆ ಮತ್ತು ಶ್ರೀ. ಕೊಂಡಜ್ಜಿ ಬಸಪ್ಪ



ಉಪ ಸಚಿವರಾದ ಶ್ರೀ ಕೊಂಡಜ್ಜಿ ಬಸಪ್ಪ, ಶ್ರೀ. ರಾಮಕೃಷ್ಣ ಹೆಗಡೆ,
ಸಹಕಾರ ಅಬಕಾರಿ ಹಾಗೂ ಹಣಕಾಸು ಸಚಿವರು,
ಮತ್ತು ಐ.ಎ.ಎಸ್. ಅಧಿಕಾರಿ ಶ್ರೀ ಆರ್. ಭರಣಯ್ಯ.



ಧಾರವಾಡದಲ್ಲಿ ಯೋಜನೆಯೊಂದನ್ನು ಉದ್ಘಾಟನೆ
ಮಾಡುತ್ತಿರುವ ಕೇಂದ್ರ ಸಾರಿಗೆ ಹಾಗೂ ವಾರ್ತಾ
ಸಚಿವರಾದ ಶ್ರೀ ರಾಜ್ ಬಹದ್ದೂರು, ರಾಜ್ಯ
ಲೋಕೋಪಯೋಗಿ ಸಚಿವರಾದ
ಶ್ರೀ. ಹೆಚ್. ಎಂ. ಚನ್ನಬಸಪ್ಪ,
ಶ್ರೀ. ಐ.ಜಿ ಸನದಿ ಮತ್ತು
ಶ್ರೀ. ಕೊಂಡಜ್ಜಿ ಬಸಪ್ಪನವರು ಉಪಸ್ಥಿತರಿದ್ದರು.



ಮೈಸೂರು ರಾಜ್ಯದ ರಾಜ್ಯಪಾಲರಾದ
ಶ್ರೀ ಧರ್ಮವೀರ, ಶ್ರೀ ಎಂ.ಕೆ.ಪಾಣಿ ಅವರೊಂದಿಗೆ
ಕೊಂಡಜ್ಜಿ ಗ್ರಾಮದ ಸ್ಕೌಟ್ಸ್ ಕ್ಯಾಂಪಸ್‌ನಲ್ಲಿ ಕೊಂಡಜ್ಜಿ
ಬಸಪ್ಪನವರೊಂದಿಗೆ. ಬಸಪ್ಪನವರ ಪುತ್ರಿ ಮಂಜುಳ
ಚಿತ್ರದಲ್ಲಿದ್ದಾರೆ.

1965 ಆಗಸ್ಟ್ 7 ರಂದು ಮೈಸೂರಿನ
ರೀಜನಲ್ ಕಾಲೇಜ್ ಆಫ್ ಎಜುಕೇಶನ್
ಉದ್ಘಾಟನಾ ಸಮಾರಂಭದಲ್ಲಿ ಕೇಂದ್ರ
ಶಿಕ್ಷಣ ಸಚಿವರಾದ ಶ್ರೀ ಎಂ.ಸಿ. ಚಾಗ್ಲಾ
ಅವರೊಂದಿಗೆ ಮೈಸೂರು ರಾಜ್ಯದ
ಉಪಸಚಿವರಾದ ಶ್ರೀ ಕೊಂಡಜ್ಜಿ ಬಸಪ್ಪ.





ಕೊಂಡಜ್ಜಿ ಸ್ಕೌಟ್ಸ್ ಕೇಂದ್ರದಲ್ಲಿ ಮುಖ್ಯಮಂತ್ರಿ
ಶ್ರೀ ಡಿ.ದೇವರಾಜ್ ಅರಸ್, ರಾಜ್ಯಪಾಲರಾದ ಶ್ರೀ ಮೋಹನ್‌ಲಾಲ್
ಸುಖಾಡಿಯಾ, ಶ್ರೀ. ಮುದ್ದುರಾಯಪ್ಪ ಮತ್ತು
ಶ್ರೀ. ಕೊಂಡಜ್ಜಿ ಬಸಪ್ಪನವರು.



1951ರಲ್ಲಿ ಆಸ್ಟ್ರಿಯಾ ದೇಶದ ಸಾಲ್ಸ್‌ಬರ್ಗ್‌ನಲ್ಲಿ ಜರುಗಿದ ಏಳನೆಯ
ವಿಶ್ವ ಸ್ಕೌಟ್ಸ್ ಜಾಂಬೂರಿಯಲ್ಲಿ ಭಾರತವನ್ನು ಪ್ರತಿನಿಧಿಸಿದ
ಶ್ರೀ ಕೊಂಡಜ್ಜಿ ಬಸಪ್ಪ



1942ರಲ್ಲಿ ದೊಡ್ಡಬಳ್ಳಾಪುರದ ಅನಿಬಸೆಂಟ್ ಪಾರ್ಕ್‌ನಲ್ಲಿ ನಡೆದ ಸ್ಕೌಟ್ಸ್ ಆಯುಕ್ತರ ತರಬೇತಿ ಶಿಬಿರದಲ್ಲಿ ಶ್ರೀ ಕೊಂಡಜ್ಜಿ ಬಸಪ್ಪ.



ಭಾರತದ ರಾಷ್ಟ್ರಪತಿ ಘನತೆವೆತ್ತ
ಡಾ. ರಾಜೇಂದ್ರ ಪ್ರಸಾದ್ ಅವರಿಗೆ
ಶ್ರೀ. ಕೊಂಡಜ್ಜಿ ಬಸಪ್ಪನವರನ್ನು
ರಾಷ್ಟ್ರೀಯ ಆಯುಕ್ತರು
ಪರಿಚಯಿಸುತ್ತಿರುವುದು.



ನವದೆಹಲಿಯಲ್ಲಿ ನಡೆದ ರಾಷ್ಟ ಮಟ್ಟದ
ಸ್ಕೌಟ್ಸ್ ಜಂಬೂರಿಯಲ್ಲಿ
ಕರ್ನಾಟಕ ಸ್ಕೌಟ್ಸ್ ತಂಡದೊಂದಿಗೆ
ಶ್ರೀ. ಕೊಂಡಜ್ಜಿ ಬಸಪ್ಪನವರು ಪ್ರಧಾನಿ ಪಂಡಿತ್
ಜವಹಾರ್‌ಲಾಲ್ ನೆಹರು ಅವರಿಗೆ ಗೌರವ
ಸಮರ್ಪಿಸುತ್ತಿರುವುದು.

ಲಂಡನ್‌ನ ಲಾರ್ಡ್ಸ್ ಕ್ರಿಕೆಟ್ ಮೈದಾನದಲ್ಲಿಡಾ. ನಾಡಿಗ್
ಚಂದ್ರಶೇಖರ್, ಶ್ರೀ ಚಿಗಟೇರಿ ಜಯಣ್ಣ ಮತ್ತು
ಶ್ರೀ. ಕೊಂಡಜ್ಜಿ ಬಸಪ್ಪ



1951 ರಲ್ಲಿ ಆಸ್ಟ್ರಿಯಾದಲ್ಲಿ ನಡೆದ ಏಳನೆಯ ವಿಶ್ವ ಸ್ಕೌಟ್ಸ್ ಜಾಂಬೂರಿಯಲ್ಲಿ ಶ್ರೀ. ಕೊಂಡಜ್ಜಿ ಬಸಪ್ಪ ಹಾಗೂ ಸ್ಕೌಟ್ಸ್ ತಂಡದ ಮುಖ್ಯಸ್ಥ ಶ್ರೀ. ಸರ್ಧಾರ್ ಲಕ್ಷ್ಮಣ್ ಸಿಂಗ್ ಅವರುಗಳು ಇತರೆ ದೇಶಗಳ ಪ್ರತಿನಿಧಿಗಳೊಂದಿಗೆ ಮಾತುಕತೆ ನಡೆಸುತ್ತಿರುವುದು





ಲೇಡಿ ಓಲೇವ್ ಬೇಡನ್ ಪೋವೆಲ್, ವಿಶ್ವ ಗೈಡ್ಸ್ ಮುಖ್ಯಸ್ಥರು ಮೈಸೂರು ಮಹಾರಾಜ ಜಯಚಾಮರಾಜ ಒಡೆಯರ್ ಅವರೊಂದಿಗೆ ಬೆಂಗಳೂರಿನಲ್ಲಿ. ಇವರೊಂದಿಗೆ ರಾಷ್ಟ್ರೀಯ ಆಯುಕ್ತರಾದ ಡಾ. ಹೆಚ್.ಎನ್. ಕುಂಜ್ರು ಮತ್ತು ರಾಜ್ಯ ಮುಖ್ಯ ಆಯುಕ್ತರಾದ ಪ್ರೊ. ಪಿ. ಶಿವಶಂಕರ್. 1960.

ರಾಜ್ಯಪಾಲರಾದ ಶ್ರೀ ಗೋವಿಂದ ನಾರಾಯಣ ಅವರು ಕೊಂಡಜ್ಜಿ ಸ್ಕೌಟ್ಸ್ ಕ್ಯಾಂಪಸ್‌ನಲ್ಲಿ ಸಸಿ ನೆಡುತ್ತಿರುವುದು. ಹಣಕಾಸು ಸಚಿವರಾದ ಶ್ರೀ ಎಂ.ವೈ. ಘೋರ್ಪಡೆ ಹಾಗೂ ಕೊಂಡಜ್ಜಿ ಬಸಪ್ಪ ಉಪಸ್ಥಿತರಿದ್ದಾರೆ. 1976





ರಾಜ್ಯಪಾಲರಾದ ಶ್ರೀ ಗೋಂವಿಂದ ನಾರಾಯಣ ಅವರ ಮಡದಿ ಶ್ರೀಮತಿ ಚಂದ್ರಗೋವಿಂದ ನಾರಾಯಣ ಅವರನ್ನು ಸ್ಕೌಟ್ಸ್ ನಾಯಕರಿಗೆ ಪರಿಚಯಿಸುತ್ತಿರುವುದು. ಘನತೆವೆತ್ತ ರಾಜ್ಯಪಾಲರಾದ ಗೋವಿಂದ ನಾರಾಯಣ, ಶ್ರೀ. ಕೊಂಡಜ್ಜಿ ಬಸಪ್ಪ ಹಾಗೂ ಶ್ರೀ ಮಾಗನೂರು ಬಸಪ್ಪ ಉಪಸ್ಥಿತರಿದ್ದರು.



ದೊಡ್ಡಬಳ್ಳಾಪುರದ ಡಾ.ಅನಿಬಸೆಂಟ್ ತರಬೇತಿ ಕೇಂದ್ರದಲ್ಲಿ ನಡೆದ ಕಾರ್ಯಕ್ರಮವೊಂದಕ್ಕೆ ಭೇಟಿ ನೀಡಿದ ಕೇಂದ್ರದ ಭಾರೀ ಕೈಗಾರಿಕೆಗಳ ಸಚಿವರಾದ ಶ್ರೀ ಟಿ.ಎ. ಪೈ ಅವರನ್ನು ಶ್ರೀ. ಜಿ. ಶಿಸಪ್ಪ, ಡಾ. ಕೆ.ಆರ್. ಶ್ರೀಕಂಠೇಶ್ವರ್ ಹಾಗೂ ಶ್ರೀ. ಕೊಂಡಜ್ಜಿ ಬಸಪ್ಪನವರು ಬರಮಾಡಿಕೊಂಡ ಸಂದರ್ಭ.



1972ರಲ್ಲಿ ಹುಬ್ಬಳ್ಳಿಯಲ್ಲಿ ನಡೆದ 13ನೆಯ ರಾಜ್ಯ ಸ್ಕೌಟ್ಸ್ ರ್‍ಯಾಲಿಯಲ್ಲಿ ಕೇಂದ್ರ ಕೈಗಾರಿಕಾ ಸಚಿವ ಶ್ರೀ ಟಿ.ವಿ. ಪೈ ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ.ಎ.ಎಸ್. ಅಡ್ಕೆ ಕಾಲೇಜು ಶಿಕ್ಷಣ ನಿರ್ದೇಶಕರಾದ ಶ್ರೀಮತಿ ಜಯಲಕ್ಷ್ಮಮ್ಮಣ್ಣಿ ಶ್ರೀ ಪಾಟೀಲ ಪುಟ್ಟಪ್ಪ (ಎಂ.ಪಿ) ಶ್ರೀ ಆರ್.ಜಿ. ವಾಲಿ (ಎಂ.ಎಲ್.ಎ) ಮತ್ತು ಶ್ರೀ ಕೊಂಡಜ್ಜಿ ಬಸಪ್ಪ ಭಾಗವಹಿಸಿದ್ದರು.



1978ರಲ್ಲಿ ಸಕಲೇಶಪುರದಲ್ಲಿ ನಡೆದ 15ನೆಯ ರಾಜ್ಯ ಸ್ಕೌಟ್ಸ್ ರ್‍ಯಾಲಿಯಲ್ಲಿ ರಾಷ್ಟ್ರೀಯ ಸ್ಕೌಟ್ಸ್ ಆಯುಕ್ತ ಸರ್ದಾರ್ ಲಕ್ಷ್ಮಣ್‌ಸಿಂಗ್, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ. ಕೊಂಡಜ್ಜಿ ಬಸಪ್ಪ, ಡಿ.ಪಿ.ಐ. ಶ್ರೀ ಕೆ.ಮಲ್ಲಪ್ಪ ಮತ್ತು ಸಿಸ್ಟರ್ ವಿನ್ಸೆಂಜಾ ಎ.ಸಿ, ಮೈಸೂರು ವಿಭಾಗದ ಸಹಾಯಕ ಆಯುಕ್ತರು (ಗೈಡ್ಸ್) ಭಾಗವಹಿಸಿದ್ದರು.

ಕರ್ನಾಟಕದ ಘನತೆವೆತ್ತ ರಾಜ್ಯಪಾಲರಾದ
ಶ್ರೀ ಉಮಾಶಂಕರ್ ದೀಕ್ಷಿತ್ ದೊಡ್ಡಬಳ್ಳಾಪುರದ
ಅನಿಬೆಸೆಂಟ್ ಪಾರ್ಕ್‌ಗೆ ಭೇಟಿ ನೀಡಿದ್ದರು.
ಚಿತ್ರದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ
ಶ್ರೀ ಕೊಂಡಜ್ಜಿ ಬಸಪ್ಪ ಹಾಗೂ ರಾಜ್ಯ
ಕಾರ್ಯದರ್ಶಿ ಶ್ರೀ ಎ.ಡಿ. ಆನಂದನ್ ಇದ್ದಾರೆ.





1976ರಲ್ಲಿ ಕೊಂಡಜ್ಜಿ ಬಸಪ್ಪನವರ
60ನೆಯ ಹುಟ್ಟು ಹಬ್ಬದ ಸಂದರ್ಭದಲ್ಲಿ
ಬೆಂಗಳೂರಿನ ಲಾಲ್‌ಬಾಗ್ ಗಾಜಿನ
ಮನೆಯಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ
ಮಾಜಿ ಮುಖ್ಯಮಂತ್ರಿ ಶ್ರೀ ಕೆಂಗಲ್
ಹನುಮಂತಯ್ಯ, ಶ್ರೀ ಡಿ.ದೇವರಾಜ್
ಅರಸ್, ಶ್ರೀಮತಿ ಶ್ರೀ ಬಿ.ಡಿ.ಜತ್ತಿ,
ಶ್ರೀಮತಿ ಶ್ರೀ ಕೊಂಡಜ್ಜಿ ಬಸಪ್ಪ,
ಜನರಲ್ ಕೆ. ಎಂ. ಕಾರ್ಯಪ್ಪ,
ಶ್ರೀ ಎನ್. ರಾಚಯ್ಯ ಮತ್ತು
ಶ್ರೀ ಸಿದ್ದವೀರಪ್ಪ ಉಪಸ್ಥಿತರಿದ್ದರು.



ಶ್ರೀ ಕೊಂಡಜ್ಜಿ ಬಸಪ್ಪನವರೊಂದಿಗೆ ಶ್ರೀಮತಿ ಸುಮತಿ ಮಡಿಮನ್, ಶ್ರೀಮತಿ ಲಲಿತಕೃಷ್ಣಸ್ವಾಮಿ, ಶ್ರೀಮತಿ ಇಂದಿರಾಬಾಯಿ ವಾಸುದೇವಮೂರ್ತಿ, ಶ್ರೀಮತಿ ಎಂ.ಆರ್.ಲಕ್ಷ್ಮಮ್ಮ, ಶ್ರೀ ವಿ.ಪಿ. ದೀನದಯಾಳ್ ನಾಯ್ಡು, ಶ್ರೀ ಜಿ. ಶಿವಪ್ಪ, ಡಾ.ಕೆ.ಆರ್. ಶ್ರೀಕಂಠೇಶ್ವರ್, ಶ್ರೀಮತಿ ಎಂ. ಪಾರ್ವತಿ, ಶ್ರೀ ಎನ್. ರಾಮಸ್ವಾಮಿ, ಶ್ರೀ ಕೆ. ಕಾಶೀನಾಥ್, ಡಾ. ಸಂಗಮೇಶ್ವರ ಸರ್ದಾರ್, ಶ್ರೀ ಸಿ.ಎಸ್. ಪಾಟೀಲ್, ಶ್ರೀ ಡಿ.ಜಿ. ಬಸವೇಗೌಡ, ಶ್ರೀಮತಿ ಉಷಾ ರಾಮಯ್ಯ, ಶ್ರೀ ಎಸ್. ಆದಿಕೇಶವಲು, ಶ್ರೀ ಹೆಚ್.ವೈ. ರಾಮಯ್ಯ, ರಾಜ್ಯ ಕಾರ್ಯದರ್ಶಿ ಶ್ರೀ ಎ.ಡಿ. ಆನಂದನ್, ಶ್ರೀ ಕೆ. ರಾಘವೇಂದ್ರರಾವ್, ಶ್ರೀ ಕೆ.ಜಿ. ನಂಜಪ್ಪ, ಶ್ರೀ ಆಂಟೋನಿ ಕ್ರೂಜ್.



1979ರಲ್ಲಿ ಕರ್ನಾಟಕದ ಮುಖ್ಯಮಂತ್ರಿ
ಶ್ರೀ ಆರ್.ಗುಂಡೂರಾವ್ ಅವರನ್ನು ಕರ್ನಾಟಕದ
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಅಧ್ಯಕ್ಷರನ್ನಾಗಿ
ನಾಮಕರಣ ಮಾಡಿದ ಸಂದರ್ಭದಲ್ಲಿ ಕರ್ನಾಟಕದ
ಲೋಕೋಪಯೋಗಿ ಸಚಿವರಾದ
ಶ್ರೀ ಕಾಗೋಡು ತಿಮ್ಮಪ್ಪ, ರಾಜ್ಯ ಮುಖ್ಯ
ಆಯುಕ್ತರಾದ ಶ್ರೀ ಕೊಂಡಜ್ಜಿ ಬಸಪ್ಪ, ರಾಜ್ಯ
ಸ್ಕೌಟ್ಸ್ಆಯುಕ್ತರಾದ ಶ್ರೀ ದೀನದಯಾಳ್ ನಾಯ್ಡು
ದೊಡ್ಡಬಳ್ಳಾಪುರದ ಬೆಸೆಂಟ್ ಪಾರ್ಕ್‌ನಲ್ಲಿ ನಡೆದ
ಸಮಾರಂಭದ ಚಿತ್ರ.



ದೆಹಲಿಯಲ್ಲಿ ಜರುಗಿದ ರಾಷ್ಟ್ರೀಯ ಕೌನ್ಸಿಲ್ ಸಭೆಯಲ್ಲಿ
ಸದಸ್ಯರುಗಳಾದ ಶ್ರೀಮತಿ ಲೀಲಾ ಆಂಜಿನಪ್ಪ
ಡಾ.ಎಸ್.ಬಿ ಕೌಶಿಕ್
ಹೆಚ್. ಆರ್. ಅಬ್ದುಲ್ ಗಫೂರ್
ಮೈಸೂರು ರಾಜ್ಯದ ಕುಮಾರಿ ವೈಲೆಟ್‌ಕಲೆಬ್
ಅವರೊಂದಿಗೆ ಶ್ರೀ. ಕೊಂಡಜ್ಜಿ ಬಸಪ್ಪ ಭಾಗವಹಿಸಿದ್ದರು.



ಕೊಂಡಜ್ಜಿ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರದ ಬಳಿಯ ಕೆರೆಯ ವಿಹಂಗಮನ ನೋಟ



ಕೊಂಡಜ್ಜಿಯ ಸ್ಕೌಟ್ಸ್ ತರಬೇತಿ ಕೇಂದ್ರದ ಪ್ರವೇಶದ್ವಾರದಲ್ಲಿ ಶ್ರೀಮತಿ ಲೀಲಾವತಿ
ಕರ್ನಾಟಕದ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳಾದ ಶ್ರೀ. ಜಿ.ಎಂ. ಶಂಕರಯ್ಯ ಮತ್ತು
ಶ್ರೀ. ಕೊಂಡಜ್ಜಿ ಬಸಪ್ಪನವರು. ಜೂನ್ 1978



2015ರಲ್ಲಿ ಕೊಂಡಜ್ಜಿ ಸ್ಕೌಟ್ಸ್ ತರಬೇತಿ ಕೇಂದ್ರದ ಸ್ಕೌಟ್ಸ್ ಗೈಡ್ಸ್‌ಗಳು.





1978ರಲ್ಲಿ ಕೊಂಡಜ್ಜಿ ಸ್ಕೌಟ್ಸ್ ಕ್ಯಾಂಪ್‌ನಲ್ಲಿ ವಿದ್ಯಾ ಇಲಾಖೆ ಸಚಿವರಾದ ಶ್ರೀ ಎಂ. ಮಲ್ಲಿಕಾರ್ಜುನ ಸ್ವಾಮಿ ಮತ್ತು
ಮೀನುಗಾರಿಕೆ ಸಚಿವರಾದ ಶ್ರೀ ಕೆ.ಟಿ. ರಾಠೋಡ್,
ಶ್ರೀ ಎಂ.ಕೆ. ಪಾಣಿ, ಶ್ರೀಮತಿ ಎಂ.ಆರ್. ಲಕ್ಷ್ಮಮ್ಮ, ಡಾ. ಸಂಗಮೇಶ್ವರ್ ಸರ್ಧಾರ್ ಮತ್ತು ಶ್ರೀ. ಕೊಂಡಜ್ಜಿ ಬಸಪ್ಪ.



1937ರಲ್ಲಿ ಕೊಂಡಜ್ಜಿ ಬಸಪ್ಪ ವಿದ್ಯಾರ್ಥಿ ಆಗಿದ್ದಾಗ. ಪುಣೆ ಕಾನೂನು ಕಾಲೇಜಿನಲ್ಲಿ.



ನಿಂತಿರುವವರು (ಎಡದಿಂದ) ಎ.ಜೆ. ನರೂನ, ಎ. ಭೀಮಪ್ಪ ನಾಯ್ಕ್ ಎಸ್. ಕರಿಯಪ್ಪ ಬಿ.ವಿ.ಲಂಕಪ್ಪ ಪ್ರೊ.ಎಸ್.ಬಿ. ಬೊಂಡಾಡೆ ಶ್ರೀ. ಕೊಂಡಜ್ಜಿ ಬಸಪ್ಪ. ಕುಳಿತಿರುವವರು (ಎಡದಿಂದ) ಡಾ.ಕೆ.ವಿ.ಪುಟ್ಟಪ್ಪ (ಕುವೆಂಪು), ಕುಲಪತಿ ಡಾ.ವಿ.ಎಲ್. ಡಿಸೋಜಾ ವೈ. ಧರ್ಮಪ್ಪ ಎಂ.ಪಿ.ಎಲ್. ಶಾಸ್ತ್ರಿ ಹೆಚ್.ಎಂ. ಗಂಗಾಧರಯ್ಯ.



ಶ್ರೀಮತಿ ಸರ್ವಮಂಗಳಮ್ಮ
ಮತ್ತು ಶ್ರೀ ಕೊಂಡಜ್ಜಿ ಬಸಪ್ಪ.



ಶ್ರೀಮತಿ ಸರ್ವಮಂಗಳಮ್ಮ
ಹಾಗೂ ಶ್ರೀ ಕೊಂಡಜ್ಜಿ
ಬಸಪ್ಪನವರು ಮಕ್ಕಳೊಂದಿಗೆ.
ಅಂಗರಾಜ್, ಮಂಜುಳ,
ರವೀಂದ್ರನಾಥ್, ಮೋಹನ್
ಕುಮಾರ್ ಮತ್ತು
ಕಂದಗಲ್ಲು ಪಾರ್ವತಮ್ಮ.



ಕೊಂಡಜ್ಜಿ ಬಸಪ್ಪನವರ ಪ್ರತಿಮೆ
ಅನಾವರಣದ ಸಂದರ್ಭದಲ್ಲಿ
ಮೋಹನ್ ಕೊಂಡಜ್ಜಿ,
ಕೆ.ಬಿ. ರಾಜಶೇಖರ್, ಶ್ರೀಮತಿ
ಮಂಜುಳ ವಸಂತ್‌ಕುಮಾರ್,
ಕೆ.ಬಿ. ವಿಜಯ್ ಕುಮಾರ್,
ಕೊಂಡಜ್ಜಿ ಷಣ್ಮುಖಪ್ಪ,
ಶ್ರೀಮತಿ ಸರ್ವಮಂಗಳಮ್ಮ,
ಡಾ.ಕೆ.ಬಿ ಗುರುಮೂರ್ತಿ,
ಕೆ.ಬಿ. ರವೀಂದ್ರನಾಥ್,
ಕೆ.ಬಿ.ಲಿಂಗರಾಜ್.



ಸೊಸೆಯಂದಿರು: ಚಂಚಲ, ಇಂದಿರಾ, ದಾಕ್ಷಾಯಿಣಿ ರಾಜಶೇಖರ್ ಲೀಲಾ ಮತ್ತು ಲೀಲಾ
ಷಣ್ಮುಖಪ್ಪ ಅವರ ಮಕ್ಕಳು. ರವೀಂದ್ರನಾಥ್, ವಿಜಯ್‌ಕುಮಾರ್,
ಡಾ. ಗುರುಮೂರ್ತಿ ಮತ್ತು ಷಣ್ಮುಖಪ್ಪ ಹಾಗೂ ತಾಯಿ ಸರ್ವಮಂಗಳಮ್ಮ ಅವರೊಂದಿಗೆ.



ಮಾವ ಕಂದಗಲ್ ಪಟೇಲ್ ಚನ್ನಬಸಪ್ಪ



ಕೊಂಡಜ್ಜಿ ಬಸಪ್ಪನವರ ತಂದೆ ಗೌಡ್ರು ನಿಂಗಪ್ಪ



ಕೊಂಡಜ್ಜಿ ಬಸಪ್ಪನವರ ಹಿರಿಯ ಮಗ
ದಿವಂಗತ ರಾಜಶೇಖರ್



ಕೊಂಡಜ್ಜಿಯ ಬಳಿ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರದ ಆರಂಭಿಕ ದಿನಗಳ ಒಂದು ನೋಟ.





ಕೊಂಡಜ್ಜಿಯಲ್ಲಿ ಜಯಚಾಮರಾಜೇಂದ್ರ ಲಾಗ್ ಕ್ಯಾಬಿನ್‌ಗಳ ವಿಹಂಗಮನ ನೋಟ.

ಗೈಡ್ಸ್‌ನ ರಾಜ್ಯ ಆಯುಕ್ತರಾದ ಶ್ರೀಮತಿ ಆಕ್ಟೇವಿಯಾ ಅಲ್‌ಬುಕರ್ಕ ಮತ್ತು ಶ್ರೀ ಕೊಂಡಜ್ಜಿ ಬಸಪ್ಪನವರು ಬಳ್ಳಾರಿಯ ಸಂಡೂರಿನಲ್ಲಿ ನಡೆದ 14ನೆಯ ರಾಜ್ಯ ಸ್ಕೌಟ್ಸ್ ರ್‍ಯಾಲಿಯಲ್ಲಿ ಮಕ್ಕಳೊಂದಿಗೆ ಇರುವ ಚಿತ್ರ.



1978ರಲ್ಲಿ ಕೊಂಡಜ್ಜಿ ಕ್ಯಾಂಪ್ ಮುಖ್ಯ ದ್ವಾರದಲ್ಲಿ ಶ್ರೀ ಎಸ್. ಆದಿಕೇಶವಲು, ಡಾ.ಎಸ್.ಬಿ. ಕೌಶಿಕ್
ಶ್ರೀ ವಿ.ಪಿ. ದೀನದಯಾಳ್ ನಾಯ್ಡು, ಶ್ರೀ ಎ.ಡಿ. ಆನಂದನ್ ಮತ್ತು ಶ್ರೀ ಕೆ.ಬಿ. ನಂಜಪ್ಪ.





## ಸ್ಕೌಟ್ಸ್ ಚಳವಳಿಯ ಬಗ್ಗೆ ವಿಶ್ವನಾಯಕರ ಚಿಂತನೆ

ಭಾರತದ ಪ್ರತಿ ಮನೆಯಲ್ಲೂ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಂತಹ ಮಕ್ಕಳಿರಬೇಕೆಂದು ನಾನು ಅಪೇಕ್ಷಿಸುತ್ತೇನೆ.

**ಮಹಾತ್ಮ ಗಾಂಧಿ**

ನನ್ನ ದೃಷ್ಟಿಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಅತ್ಯುತ್ತಮ ಆಸ್ತಿ. ಅವರು ಹೆಚ್ಚು ವಿಕಾಸಗೊಂಡಷ್ಟೂ ರಾಷ್ಟ್ರಕ್ಕೆ ಹೆಚ್ಚು ಒಳಿತಾಗುತ್ತದೆ.

**ಜವಹಾರ್‌ಲಾಲ್ ನೆಹರು**

ನನಗೇನಾದರೂ ಒಂದು ಡಜನ್ ಮಕ್ಕಳಿದ್ದಿದ್ದರೆ ಅವರಲ್ಲಿ ಪ್ರತಿಯೊಬ್ಬರನ್ನೂ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಕಳುಹಿಸುತ್ತಿದ್ದೆ

**ಅನಿಬೆಸೆಂಟ್**

ರಾಷ್ಟ್ರ ಸೇವೆಯ ಆದರ್ಶವನ್ನು ಹರಡಲು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ಮಹತ್ವದ ಪಾತ್ರ ವಹಿಸಿದೆ.

**ಇಂದಿರಾ ಗಾಂಧಿ**